

# ಜ್ಯೋತಿಷ ಬಾಲಬೋಧೆ

## ಜ್ಯೋತಿಶ್ಶಾಸ್ತ್ರ ಅಭ್ಯಾಸಕ್ಕೆ ಪ್ರಥಮ ಪುಸ್ತಕ



ಟಿ.ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್

ಚಿಕ್ಕಪೇಟೆ, ಬೆಂಗಳೂರು – 560 053

ಸಟೀಕಾ

# ಜ್ಯೋತಿಷ ಬಾಲಬೋಧೆ

## ಜ್ಯೋತಿಶ್ಶಾಸ್ತ್ರ ಅಭ್ಯಾಸಕ್ಕೆ ಪ್ರಥಮ ಪುಸ್ತಕ




ಗ್ರಂಥಕರ್ತರು

ಮೈಸೂರು ಆಸ್ಥಾನ ವಿದ್ವಾನ್

**ವೇದಮೂರ್ತಿ ಎ. ಸಚ್ಚಿದಾನಂದ ಜೋಯಿಸ್**

ಮೈಸೂರು

ಪರಿಶೋಧಕರು

**ದೊಡ್ಡಬೆಲೆ ಶ್ರೀ ನಾರಾಯಣ ಶಾಸ್ತ್ರಿಗಳು**

ಪುನರ್ ಪರಿಷ್ಕರಣೆ :

ವೇದಾಗಮ ವಿಶಾರದ

**ಡಾ|| ಕೃಷ್ಣಮೂರ್ತಿ ಬಾಯಿರಿ**

ಸಹಾಯಕ ಪ್ರಾಧ್ಯಾಪಕ

ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲಾ, ಬೆಂಗಳೂರು.


---


ಪ್ರಕಾಶಕರು

**ಬಿ. ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್**

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

234, ಚಿಕ್ಕಪೇಟೆ – ಬೆಂಗಳೂರು–560 053.

ದೂರವಾಣಿ : 080 – 22258217

# JYOTISHA BALABODHE

First Book to learn Astrology

*By :* Mysore Aasthana Vidvan Vedamurthy
**A. Sachhidananda Jois, Mysore**

***Edited by :*** Vedaagama Visharada
**Dr. Krishnamurthi Bayiri**

***Published by :*** **T. S. Suresh**
***for M/s. T.N. Krishnaiah Setty & Son***
***Bangalore-53.***

---

**ಸಟೀಕಾ ಜ್ಯೋತಿಷ ಬಾಲಬೋಧ**

ಪ್ರಥಮ ಮುದ್ರಣ : 1931

ಇಪ್ಪತ್ತೆಂಟನೆಯ ಮುದ್ರಣ : 2016

ಪುಟಗಳು : 6+58 = 64

---



**ಅಕ್ಷರ ಜೋಡಣೆ :**

**ಡಿ. ಕೆ. ವಿಜಯರಾವ್**

**ಮುದ್ರಣ :**

**ಅಶ್ವಿನಿ ಪ್ರಿಂಟರ್ಸ್**

**ಕಾಟನ್ ಪೇಟೆ, ಬೆಂಗಳೂರು - 53.**

ಶ್ರೀ

ಶ್ರೀ ಲಲಿತಾಂಬಾಯೈ ನಮಃ

# ಉಪೋದ್ಘಾತ

ಸಮಸ್ತವಾದ ಸಕಲ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಕಾರಣನಾದ ಪರಬ್ರಹ್ಮನಂತೆ ನಿತ್ಯವಾದವುಗಳು ವೇದಗಳು. ವೇದಗಳ ಲಕ್ಷಣವನ್ನು ಷಡಂಗವೆಂಬ ಆರು ಶಾಸ್ತ್ರಗಳು ಸ್ಪಷ್ಟಪಡಿಸುವವು. ಆರು ಶಾಸ್ತ್ರಗಳಲ್ಲಿ ಪರಬ್ರಹ್ಮನಿಗೆ ನೇತ್ರಪ್ರಾಯವಾದುದು ಜ್ಯೋತಿಶ್ಶಾಸ್ತ್ರವು. ಈ ಜ್ಯೋತಿಶ್ಶಾಸ್ತ್ರವನ್ನು ಮುಹೂರ್ತಸ್ಕಂಧ, ಜಾತಕಸ್ಕಂಧ, ಗಣಿತಸ್ಕಂಧವೆಂಬುದಾಗಿ ಮೂರು ಭಾಗಗಳಾಗಿ ವಿಂಗಡಿಸಿ, ಪ್ರಾಚೀನ ಮಹರ್ಷಿಗಳು ಗ್ರಂಥಗಳನ್ನು ಅಸಂಖ್ಯಾತವಾಗಿ ಬರೆದಿರುವರು. ಅಂಥ ಗ್ರಂಥಗಳನ್ನು ಸಮಗ್ರವಾಗಿ ಪರಿಶೀಲಿಸಲು ಜನಸಾಮಾನ್ಯರಿಗೆ ಕಷ್ಟವಾದುದರಿಂದ ಅಂಥವರಿಗೆ ಜ್ಯೋತಿಶ್ಶಾಸ್ತ್ರದ ಮುಖ್ಯ ಭಾಗಗಳನ್ನು ಸುಲಭ ರೀತಿಯಲ್ಲಿ ತಿಳಿಸಬೇಕೆಂದು ಆಲೋಚಿಸಿ, ಪ್ರಕೃತದ ಮುಹೂರ್ತಸ್ಕಂಧದ ಕೆಲವು ವಿಷಯಗಳನ್ನು ಮಾತ್ರ ಶ್ಲೋಕ ತಾತ್ಪರ್ಯಗಳಿಂದ ಈ ಪುಸ್ತಕದಲ್ಲಿ ವಿವರಿಸಿರುತ್ತದೆ.

ಜ್ಯೋತಿಶ್ಶಾಸ್ತ್ರ ಅಧ್ಯಯನ ಮಾಡಲಿಚ್ಛಿಸುವವರಿಗೆ ಹಾಗೂ ವಿದ್ಯಾರ್ಥಿಗಳಿಗೆ ಅತ್ಯವಶ್ಯಕ ಪುಸ್ತಕ.

ಜ್ಯೋತಿಷಾಭ್ಯಾಸಿಗಳು, ಆಸಕ್ತರು ಈ ಪುಸ್ತಕವನ್ನು ಪರಿಶೀಲಿಸಿ ಸತ್ಕರ್ಮಾನುಷ್ಠಾನ ತತ್ಪರರಾಗಿ ನನ್ನ ಶ್ರಮವನ್ನು ಸಾರ್ಥಕಪಡಿಸಬೇಕೆಂದು ಪ್ರಾರ್ಥಿಸುವ,

ಸಜ್ಜನ ವಿಧೇಯ
ಎ. ಸಚ್ಚಿದಾನಂದ ಜ್ಯೋತಿಷ್ಯ
ಸಿದ್ಧಾಂತಿ

ಮೈಸೂರು
18-9-1931

# ವಿಷಯಾನುಕ್ರಮಣಿಕೆ


| ವಿಷಯ | ಪುಟ |
|---|---|
| ಮಂಗಳಾಚರಣ | 1 |
| ಸಂವತ್ಸರ ಪರಿಜ್ಞಾನ | 1 |
| ಅಯನ ಪರಿಜ್ಞಾನ | 2 |
| ಋತು ಪರಿಜ್ಞಾನ | 2 |
| ಮಾಸ ಪರಿಜ್ಞಾನ | 2 |
| ಪಕ್ಷ ಪರಿಜ್ಞಾನ | 3 |
| ತಿಥಿ ಪರಿಜ್ಞಾನ | 3 |
| ವಾರ ಪರಿಜ್ಞಾನ | 4 |
| ನಕ್ಷತ್ರ ಪರಿಜ್ಞಾನ | 4 |
| ಯೋಗ ಪರಿಜ್ಞಾನ | 5 |
| ಕರಣ ಪರಿಜ್ಞಾನ | 5 |
| ರಾಶಿ ಪರಿಜ್ಞಾನ | 6 |
| ಗ್ರಹ ಪರಿಜ್ಞಾನ | 6 |
| ರಾಶ್ಯಾಧಿಪತಿತ್ವ ಪರಿಜ್ಞಾನ | 6 |
| ಮೇಷಾದಿ ಲಗ್ನ ಪ್ರಮಾಣಗಳು | 7 |
| ಮೇಷಾದಿ ಲಗ್ನಭುಕ್ತಿ ನಿರ್ಣಯ | 7 |
| ಮೇಷಾದಿ ಸಂಕ್ರಮಣ ದಿನ ನಿರ್ಣಯ | 7 |
| ಮೇಷಾದಿ ರಾಶಿಗಳಲ್ಲಿ ನಕ್ಷತ್ರಪರಿಜ್ಞಾನ | 8 |
| ನಾಮನಕ್ಷತ್ರ ವಿವೇಕ | 9 |
| ಚಂದ್ರಬಲ ತಿಳಿಯುವ ಕ್ರಮ | 10 |
| ತಾರಾಬಲ ವಿವರ | 10 |
| ತಾರೆಗಳ ಫಲ ವಿವರ | 11 |
| ತಾರಾದಾನ ವಿವರ | 11 |
| ತಾರಾ ವಿಷಯಕ ಪರ್ಯಾಯಃ | 11 |
| ತಾರಾಧಿಪತಿಗಳ ಫಲ ವಿವರ | 12 |
| ತಾರೆಗಳ ವಾಹನ ವಿವರ | 12 |
| ತಿಥಿದೋಷ ವೃದ್ಧಿದೋಷ ವಿಚಾರ | 12 |
| ಗುರು ಶುಕ್ರ ಚಂದ್ರರ ಬಾಲ ವೃದ್ಧತ್ವ ವಿವರ | 13 |
| ಸಂಕ್ರಮಣ ಫಲ | 13 |
| ಜನ್ಮನಕ್ಷತ್ರ ವಾರ ಫಲ | 14 |
| ಮಾಸಫಲ ವಿವರ | 14 |
| ನಿತ್ಯಗ್ರಹದಶಾ ವಿವರ | 14 |
| ಕಾಲಹೋರಾ ವಿವರ | 15 |
| ಕಾಲಹೋರಾಫಲ | 16 |
| ಉಚ್ಚನೀಚತ್ವ ವಿವರ | 17 |
| ಗ್ರಹಗಳ ಉತ್ತಮ ಫಲ ಕೊಡತಕ್ಕ ರಾಶಿಗಳು | 17 |
| ಗ್ರಹಗಳ ಫಲಕಾಲಗಳು | 18 |
| ರವಿ ಗೋಚಾರ ಫಲ | 18 |
| ಚಂದ್ರ ಗೋಚಾರ ಫಲ | 18 |
| ಅಂಗಾರಕ ಗೋಚಾರ ಫಲ | 19 |
| ಬುಧ ಗೋಚಾರ ಫಲ | 19 |
| ಗುರು ಗೋಚಾರ ಫಲ | 19 |
| ಶುಕ್ರ ಗೋಚಾರ ಫಲ | 20 |
| ಶನಿ ಗೋಚಾರ ಫಲ | 20 |
| ರಾಹು ಕೇತು ಗೋಚಾರ ಫಲ | 20 |
| ಗ್ರಹದೃಷ್ಟಿ ವಿಷಯ | 21 |
| ತಿಥ್ಯಧಿದೇವತೆಗಳ ವಿಷಯ | 21 |
| ನಕ್ಷತ್ರಗಳ ಅಧಿದೇವತೆಗಳ ವಿಷಯ | 21 |
| ನಕ್ಷತ್ರಗಳಿಗೆ ಕ್ಷಿಪ್ರಾದಿ ಸಂಜ್ಞಾ ವಿಷಯ | 22 |
| ಪ್ರಯಾಣಕ್ಕೆ ತಿಥಿಗಳು | 23 |
| ತಿಥಿಗಳ ಶೂಲ ವಿಷಯ | 23 |
| ವಾರಶೂಲ ವಿಷಯ | 24 |
| ವಾರದೋಷ ವಿಷಯ | 24 |
| ವಾರಶೂಲ ಶಾಂತಿ ವಿಷಯ | 25 |
| ವಾರ ಫಲ | 25 |
| ಪ್ರಯಾಣ ನಕ್ಷತ್ರಗಳು | 25 |
| ಪ್ರಯಾಣಕ್ಕೆ ನಿಷೇಧ ನಕ್ಷತ್ರಗಳು | 26 |
| ಈ ನಕ್ಷತ್ರಗಳಲ್ಲಿ ತ್ಯಾಜ್ಯ ಘಳಿಗೆಗಳು | 26 |
| ತಿಥಿ ತ್ಯಾಜ್ಯ ವಿಷಯ | 26 |
| ನಕ್ಷತ್ರ ತ್ಯಾಜ್ಯ ವಿಷಯ | 27 |
| ಯೋಗ ತ್ಯಾಜ್ಯ ವಿಷಯ | 27 |
| ಕರಣ ತ್ಯಾಜ್ಯ ವಿಷಯ | 28 |
| ಪ್ರಯಾಣ ಲಗ್ನಫಲ | 28 |
| ಲಗ್ನ ತ್ಯಾಜ್ಯ ವಿಷಯ | 29 |

| | |
|---|---|
| ನಕ್ಷತ್ರಗಳಲ್ಲಿ ಅಮೃತಕಾಲಗಳು | 29 |
| ಅಮೃತಸಿದ್ಧಿ ಯೋಗಗಳು | 30 |
| ದಗ್ಧ ಯೋಗಗಳು | 30 |
| ಮೃತ್ಯು ಯೋಗಗಳು | 30 |
| ದಿಗ್ರಾಹು ವಿಷಯ | 31 |
| ರಾಹುಕಾಲ ವಿಷಯ | 31 |
| ಯೋಗಿನೀ ವಿಷಯ | 31 |
| ಸಾತ್ವಿಕ ರಾಜಸ ತಾಮಸ ಯೋಗಗಳು | 32 |
| ಪಂಚಕವು | 32 |
| ಪಂಚತತ್ವಗಳು | 33 |
| ಕ್ಷೌರ ಪ್ರಕರಣ ಶುಭ ತಿಥಿಗಳು | 34 |
| ಅಶುಭ ತಿಥಿಗಳು | 34 |
| ಶುಭಾಶುಭ ವಾರಗಳು | 34 |
| ಶುಭ ನಕ್ಷತ್ರಗಳು | 35 |
| ವರ್ಜ್ಯ ನಕ್ಷತ್ರಗಳು | 35 |
| ವರ್ಜ್ಯ ಕಾಲಗಳು | 35 |
| ಪಾದಾಚ್ಛಾಯ ವಿಷಯ | 35 |
| ಪುಷ್ಕರಾಂಶ ವಿಷಯ | 36 |
| ಸುಭಿಕ್ಷ ದುರ್ಭಿಕ್ಷ ವಿಷಯ | 36 |
| ಗರ್ಭಿಣೀ ಪ್ರಸವ ಕಾಲಜ್ಞಾನ | 37 |
| ಗ್ರಾಮ ಸಾಲಾವಳಿ ವಿಷಯ | 37 |
| ರಜಸ್ವಲಾ ಪ್ರಕರಣ | 38 |
| ವಾರಫಲ | 38 |
| ಶುಭ ನಕ್ಷತ್ರಗಳು | 39 |
| ದುಷ್ಟನಕ್ಷತ್ರಗಳು | 39 |
| ದುಷ್ಟನಕ್ಷತ್ರಪಾದ ಫಲಗಳು | 39 |
| ಲಗ್ನಫಲ | 40 |
| ವಸ್ತ್ರಫಲ | 41 |
| ಬಿಂದುಫಲ | 41 |
| ನಕ್ಷತ್ರ ದೋಷಕಾಲ ನಿರ್ಣಯ | 41 |
| ಶುಭ ಶಕುನಗಳು | 42 |
| ಅಶುಭ ಶಕುನಗಳು | 42 |
| ಉಡುದಶಾಕ್ರಮ | 43 |
| ಅಕ್ಷರ ಸಂಕೇತ ವಿವರ | 43 |
| ಸಂಯುಕ್ತಾಕ್ಷರವುಳ್ಳ ಹೆಸರಿನ ನಕ್ಷತ್ರ ತಿಳಿಯುವ ಕ್ರಮ | 43 |
| ಜಾತಕರ್ಮ ವಿಷಯ | 44 |
| ನಾಮಕರಣ ವಿಷಯ | 44 |
| ಕಂಚುಕಧಾರಣ ವಿಷಯ | 44 |
| ಡೋಲಾರೋಹಣ ವಿಷಯ | 45 |
| ಅನ್ನಪ್ರಾಶನ ವಿಷಯ | 45 |
| ನೂತನ ವಸ್ತ್ರಧಾರಣ ವಿಷಯ | 45 |
| ಕೇಶಖಂಡನ ವಿಷಯ | 46 |
| ಕರ್ಣವೇದ ವಿಷಯ | 46 |
| ಚೌಲ ವಿಷಯ | 46 |
| ಅಕ್ಷರ ಸ್ವೀಕರಣ ವಿಷಯ | 47 |
| ಉಪನಯನ ಪ್ರಕರಣ | 47 |
| ವಿವಾಹಯೋಗ್ಯ ಮಾಸಗಳು | 48 |
| ವಿವಾಹಯೋಗ್ಯ ನಕ್ಷತ್ರಗಳು | 50 |
| ಲಗ್ನಬಲ ವಿಷಯ | 50 |
| ಅಭಿಜಿತ್ ಲಗ್ನ ವಿಷಯ | 51 |
| ಗೋಧೂಳಿಲಗ್ನ ವಿಷಯ | 51 |
| ವಧೂಪ್ರವೇಶ ಕಾಲ | 51 |
| ವರ್ಷ ಮಾಸಾಂತ್ಯ ವರ್ಜ್ಯ ದಿನಗಳು | 52 |
| ಏಕವಿಂಶತಿ ದೋಷಗಳು | 52 |
| ಇತರ ದೋಷಗಳು | 56 |
| ಮುಖ್ಯ ವಿಷಯ | 56 |
| ಅಭ್ಯಂಗ ಸ್ನಾನ ವಿಷಯ | 57 |
| ಗ್ರಹಗಳಿಗೆ ಮಿತ್ರ ಸಮಶತ್ರುತ್ವ ವಿಷಯ | 57 |
| ಗ್ರಹಗಳಿಗೆ ಮೂಲತ್ರಿಕೋಣ ರಾಶಿಗಳ ವಿಷಯ | 57 |
| ರಾಹುಕೇತುಗಳಿಗೆ ಉಚ್ಚಮೂಲ ಶತ್ರು-ಮಿತ್ರತ್ವ ವಿಷಯ | 58 |
| ಗ್ರಹಗಳ ಲತ್ತಾ ವಿಷಯ | 58 |
| ಗ್ರಹಗಳ ಲತ್ತಾ ಫಲವು | 58 |


**ಜ್ಯೋತಿಷ ಬಾಲಬೋಧೆಯ ವಿಷಯಾನುಕ್ರಮಣಿಕೆ ಸಂಪೂರ್ಣವು**

## ಎಲ್ಲ ಜ್ಯೋತಿಷ್ಕರು - ಅಭ್ಯಾಸಿಗಳು ಸಂಗ್ರಹಿಸಬೇಕಾದ ನಮ್ಮ ಸಂಸ್ಥೆಯ ಉಪಯುಕ್ತ ಪ್ರಕಟಣೆಗಳು

- **ಮಹದೇವಕೃತ ಜಾತಕತತ್ವಮ್**

ಅನುವಾದ : ಶ್ರೀ ಸಿ. ಎಸ್. ವೆಂಕಟರಾಮಾಶಾಸ್ತ್ರಿ
ಅತಿ ಪ್ರಾಚೀನ ಉಪಯುಕ್ತ ಜ್ಯೋತಿಷ ಪುಸ್ತಕ

- **ಜಾತಕಜ್ಞಾನರತ್ನಾವಳಿ**

ಲೇಖಕರು : ವೇ|| ವಿ. ಸುಬ್ಬರಾವ್ ಕೊನೇರಿ
ಪ್ರತಿ ಜ್ಯೋತಿಷ್ಯರು ಸಂಗ್ರಹಿಸಬೇಕಾದ ಅಪೂರ್ವ ಜ್ಯೋತಿಷ ಗ್ರಂಥ

- **ಮುಹೂರ್ತದರ್ಪಣ ಮತ್ತು ಮುಹೂರ್ತದೀಪಿಕಾ**

ಮೂಲಶ್ಲೋಕಗಳು ಹಾಗೂ ತಾತ್ಪರ್ಯ ಸಾಹಿತ
ಜ್ಯೋತಿಷ ಅಭ್ಯಾಸಿಗಳಿಗೆ ಉಪಯುಕ್ತ ಪುಸ್ತಕ

- ವರಾಹಮಿಹಿರಾಚಾರ್ಯಕೃತ

**ಬೃಹಜ್ಜಾತಕಾಖ್ಯ ಹೋರಾಶಾಸ್ತ್ರಮ್ - ಬೃಹತ್‌ಗ್ರಂಥ**

ಅನುವಾದ : ಶ್ರೀ ಸುಬ್ರಹ್ಮಣ್ಯಶರ್ಮ

- **ಗ್ರಹಸಂಯೋಗದಿಂದ ಜಾತಕಫಲ** (ನಾಡೀಜ್ಯೋತಿಷ್ಯ)

ಲೇಖಕರು : ಶ್ರೀ ಆರ್. ಜಿ. ರಾವ್
ಆಧುನಿಕ ಯುಗದ ಅತಿ ಜನಪ್ರಿಯ ನಾಡೀಜ್ಯೋತಿಷ್ಯ ಗ್ರಂಥ

- **ಪರಿಭ್ರಮಣದಿಂದ ಜಾತಕಫಲ** (ನಾಡೀಜ್ಯೋತಿಷ್ಯ)

ಲೇಖಕರು : ಶ್ರೀ ಆರ್. ಜಿ. ರಾವ್

- ನಾಡಿಶಾಸ್ತ್ರಆಧಾರಿತ

**ಜಾತಕ ಹೋರಾಫಲ ದೀಪಿಕ**

ಲೇಖಕರು : ಶ್ರೀ ಆರ್. ಜಿ. ರಾವ್

- **ನಾಡಿಶಾಸ್ತ್ರದ ಭಾವರಹಸ್ಯಗಳು**

ಲೇಖಕರು : ಎನ್. ಆರ್. ಕೆ. ರಾವ್

- **ಜ್ಯೋತಿಷ್ಯ ಸರ್ವವಿಷಯಾಮೃತ ಸಂಗ್ರಹ**

ಲೇಖಕರು : ರೋಣೂರು ಶ್ರೀ ವೆಂಕಟರಾಮಾಶಾಸ್ತ್ರಿಗಳು

ಶ್ರೀರಸ್ತು

ಸಟೀಕಾ

# ಜ್ಯೋತಿಷ ಬಾಲಬೋಧೆ

## ಮಂಗಳಾಚರಣ

ಶ್ರುತಿಸೀಮಂತಸಿಂಧೂರರಜೋಭಿಃ ಫಾಲಶೋಭಿತಂ ।
ದೇವ್ಯಾಃ ಪದಂ ಸದಾ ಧ್ಯಾಯೇತ್ ಯತ್ನಕಾರ್ಯಾರ್ಥಸಿದ್ಧಯೇ ॥

## ಸಂವತ್ಸರ ಪರಿಜ್ಞಾನ

★ ಪ್ರಭವೋ ವಿಭವಃ ಶುಕ್ಲಃ ಪ್ರಮೋದೂತಃ ಪ್ರಜೋತ್ಪತ್ತಿಃ । ಅಂಗಿರಸಃ ಶ್ರೀಮುಖೋ ಭಾವೋ ಯುವೋ ಧಾಧಾತಾಥೇಶ್ವರಃ ॥ 1 ॥ ಬಹುಧಾನ್ಯಃ ಪ್ರಮಾದೀಚ ವಿಕ್ರಮೋ ವಿಷುವತ್ಸರಃ । ಚಿತ್ರಭಾನುಃ ಸ್ವಭಾನುಶ್ಚತಾರಣಃ ಪಾರ್ಥಿವೋ ವ್ಯಯಃ ॥2॥ ಸರ್ವಜಿತ್ಸರ್ವಧಾರೀಚ ವಿರೋಧೀ ವಿಕೃತೀ ಖರಃ । ನಂದನೋ ವಿಜಯಶ್ಚೈವ ಜಯೋ ಮನ್ಮಥದುರ್ಮುಖೌ ॥3॥ ಹೇವಿಳಂಬಿಃ ವಿಳಂಬಿಶ್ಚ ವಿಕಾರೀ ಶಾರ್ವರೀ ಪ್ಲವಃ । ಶುಭಕೃಚ್ಛೋಭಕೃತ್ಕ್ರೋಧೀ ವಿಶ್ವಾವಸುಪರಾಭವೌ ॥4॥ ಪ್ಲವಂಗಃ ಕೀಲಕಸ್ಸೌಮ್ಯಃ ಸಾಧಾರಣಃ ವಿರೋಧಿಕೃತ್ । ಪರಿಧಾವೀ ಪ್ರಮಾದೀಚ ಆನಂದೋ ರಾಕ್ಷಸೋ ನಳಃ ॥5॥ಪಿಂಗಳಃ ಕಾಳಾಯುಕ್ತಿಶ್ಚ ಸಿದ್ಧಾರ್ಥೀ ರೌದ್ರ ದುರ್ಮತೀ । ದುಂದುಭೀ ರುಧಿರೋದ್ಗಾರೀ ರಕ್ತಾಕ್ಷಿಕ್ರೋಧನಾಕ್ಷಯಾಃ ॥6॥

ತಾತ್ಪರ್ಯ

| | | | |
|---|---|---|---|
| 1. ಪ್ರಭವ | 2. ವಿಭವ | 3. ಶುಕ್ಲ | 4. ಪ್ರಮೋದೂತ |
| 5. ಪ್ರಜೋತ್ಪತ್ತಿ | 6. ಆಂಗೀರಸ | 7. ಶ್ರೀಮುಖ | 8. ಭಾವ |
| 9. ಯುವ | 10. ಧಾತೃ | 11. ಈಶ್ವರ | 12. ಬಹುಧಾನ್ಯ |
| 13. ಪ್ರಮಾದಿ | 14. ವಿಕ್ರಮ | 15. ವಿಷು | 16. ಚಿತ್ರಭಾನು |
| 17. ಸ್ವಭಾನು | 18. ತಾರಣ | 19. ಪಾರ್ಥಿವ | 20. ವ್ಯಯ |
| 21. ಸರ್ವಜಿತು | 22. ಸರ್ವಧಾರಿ | 23. ವಿರೋಧಿ | 24. ವಿಕೃತ |
| 25. ಖರ | 26. ನಂದನ | 27. ವಿಜಯ | 28. ಜಯ |
| 29. ಮನ್ಮಥ | 30. ದುರ್ಮುಖಿ | 31. ಹೇವಿಳಂಬಿ | 32. ವಿಳಂಬಿ |
| 33. ವಿಕಾರ | 34. ಶಾರ್ವರಿ | 35. ಪ್ಲವ | 36. ಶುಭಕೃತ್ |

| | | | |
|---|---|---|---|
| 37. ಶೋಭಕೃತು | 38. ಕ್ರೋಧಿ | 39. ವಿಶ್ವಾವಸು | 40. ಪರಾಭವ |
| 41. ಪ್ಲವಂಗ | 42. ಕೀಲಕ | 43. ಸೌಮ್ಯ | 44. ಸಾಧಾರಣ |
| 45. ವಿರೋಧಿಕೃತು | 46. ಪರೀಧಾವಿ | 47. ಪ್ರಮಾದೀಚ | 48. ಆನಂದ |
| 49. ರಾಕ್ಷಸ | 50. ನಳ | 51. ಪೈಂಗಳ | 52. ಕಾಳಾಯುಕ್ತಿ |
| 53. ಸಿದ್ಧಾರ್ಥಿ | 54. ರೌದ್ರಿ | 55. ದುರ್ಮತಿ | 56. ದುಂದುಭಿ |
| 57. ರುಧಿರೋದ್ಗಾರಿ | 58. ರಕ್ತಾಕ್ಷಿ | 59. ಕ್ರೋಧನ | 60. ಅಕ್ಷಯ |

ಎಂಬುದಾಗಿ ಅರವತ್ತು ವರ್ಷಗಳನ್ನು ತಿಳಿಯುವುದು.

## ಅಯನ ಪರಿಜ್ಞಾನ

➤ **ಮಕರಾದ್ರಾಶಿಷಟ್ಕೇರ್ಕೇ ಪ್ರೋಕ್ತಂ ಚೈವೋತ್ತರಾಯಣಂ ।**
**ಷಟ್ಸುಕರ್ಕಾದಿತೋ ಜ್ಞೇಯಂ ದಕ್ಷಿಣಂ ಹ್ಯಯನಂ ರವೇಃ ॥7॥**

ತಾ॥ ಸೂರ್ಯನು ಮಕರ ರಾಶಿಯಿಂದ ಮಿಥುನ ಮಾಸಾಂತ್ಯದವರೆಗೆ ಸಂಚರಿಸುವುದರಿಂದ ಇದಕ್ಕೆ ಉತ್ತರಾಯಣವೆಂದೂ, ಕರ್ಕಾಟಾದಿ ಧನುರಂತ್ಯದ ವರೆವಿಗೆ ಸೂರ್ಯನು ಸಂಚರಿಸುವುದರಿಂದ ಇದಕ್ಕೆ ದಕ್ಷಿಣಾಯಣವೆಂದೂ, ಈ ಪ್ರಕಾರ ಒಂದು ಸಂವತ್ಸರಕ್ಕೆ ಎರಡು ಅಯನಗಳನ್ನು ತಿಳಿಯುವುದು.

## ಋತು ಪರಿಜ್ಞಾನ

➤ **ವಸಂತೋ ಗ್ರೀಷ್ಮಸಂಜ್ಞಶ್ಚ ತದ್ವದ್ವರ್ಷಾ ತತಃ ಶರತ್ ।**
**ಹೇಮಂತಃ ಶಿಶಿರಶ್ಚೈವ ಷಡೈತೇ ಋತುವಃ ಸ್ಮೃತಾಃ ॥8॥**

ತಾ॥ ಒಂದು ಸಂವತ್ಸರಕ್ಕೆ ಆರು ಋತುಗಳು. ವಸಂತಋತು, ಗ್ರೀಷ್ಮಋತು, ವರ್ಷಋತು, ಶರದೃತು, ಹೇಮಂತಋತು, ಶಿಶಿರಋತು. ಈ ಋತುಗಳನ್ನು ಎರಡೆರಡು ತಿಂಗಳುಗಳಿಗೆ ಒಂದೊಂದರಂತೆ ಹನ್ನೆರಡು ತಿಂಗಳುಗಳಿಗೆ ಆರು ಋತುಗಳನ್ನು ತಿಳಿಯುವುದು.

## ಮಾಸ ಪರಿಜ್ಞಾನ

➤ **ಮಾಸಶ್ಚೈತ್ರೋಥ ವೈಶಾಖೋ ಜೇಷ್ಠ ಆಷಾಢ ಸಂಜ್ಞಕಃ ।**
**ತತಸ್ತು ಶ್ರಾವಣೋ ಭಾದ್ರಪದೋಥಾಶ್ವಿನಸಂಜ್ಞಕಃ ॥9॥**

**ಕಾರ್ತಿಕೋ ಮಾರ್ಗಶೀರ್ಷಶ್ಚ ಪೌಷ್ಯೋ ಮಾಘೋಥ ಫಾಲ್ಗುನಃ ।**
**ಏತೇ ದ್ವಾದಶಮಾಸಾಃಸ್ಯುಃ ಚಾಂದ್ರಮಾಸಾಃ ಪ್ರಕೀರ್ತಿತಾಃ ॥ 10 ॥**

| | | | |
|---|---|---|---|
| 1. ಚೈತ್ರ | 2. ವೈಶಾಖ | 3. ಜ್ಯೇಷ್ಠ | 4. ಆಷಾಢ |
| 5. ಶ್ರಾವಣ | 6. ಭಾದ್ರಪದ | 7. ಆಶ್ವಯುಜ | 8. ಕಾರ್ತಿಕ |
| 9. ಮಾರ್ಗಶೀರ್ಷ | 10. ಪುಷ್ಯ | 11. ಮಾಘ | 12. ಫಾಲ್ಗುಣ |

ಎಂಬುದಾಗಿ ಒಂದು ವರ್ಷಕ್ಕೆ 12 ತಿಂಗಳುಗಳು. ಮತ್ತು ಮೇಲೆ ತಿಳಿಸಿರುವ ಋತುಗಳಲ್ಲಿ ಸೇರಿಸುವುದು. ಅಂದರೆ,

ಚೈತ್ರ-ವೈಶಾಖ ವಸಂತಋತು ಜ್ಯೇಷ್ಠ - ಆಷಾಢ ಗ್ರೀಷ್ಮಋತು
ಶ್ರಾವಣ-ಭಾದ್ರಪದ ವರ್ಷಋತು ಆಶ್ವಯುಜ-ಕಾರ್ತಿಕ ಶರದೃತು
ಮಾರ್ಗಶಿರ-ಪುಷ್ಯ ಹೇಮಂತಋತು ಮಾಘ-ಫಾಲ್ಗುಣ ಶಿಶಿರಋತು

ಎಂದು ತಿಳಿಯುವುದು.

## ಪಕ್ಷ ಪರಿಜ್ಞಾನ

➢ **ದ್ವಾವೇವಲೋಕೇ ವಿಖ್ಯಾತೌ ಶುಕ್ಲ ಕೃಷ್ಣೇತಿ ಪಕ್ಷಕೌ ।**
**ಪ್ರತಿಪತ್ ಪೌರ್ಣಮಾಸ್ಯಾಂತಂ ಶುಕ್ಲ ಪಕ್ಷ ಇತಿ ಸ್ಮೃತಃ ॥ 11 ॥**
**ಪ್ರತಿಪದ್ದರ್ಶಮಾಸಾಂತಂ ಕೃಷ್ಣಪಕ್ಷಮಿತಿ ಸ್ಮೃತಃ ।**
**ಶುಕ್ಲೇ ತು ಶುಭಕಾರ್ಯಾಣಿ ಕೃಷ್ಣೇತ್ವಶುಭದೋ ಭವೇತ್ ॥ 12 ॥**

ತಾ॥ ಒಂದು ತಿಂಗಳಲ್ಲಿ ಎರಡು ಪಕ್ಷಗಳು. ಶುಕ್ಲಪಕ್ಷ ಮತ್ತು ಕೃಷ್ಣಪಕ್ಷ. ಪ್ರತಿಪತ್ ಮೊದಲು ಪೂರ್ಣಿಮಾ ಪರ್ಯಂತರ ಶುಕ್ಲಪಕ್ಷವು. ಪ್ರತಿಪತ್ ಮೊದಲು ದರ್ಶ ಅಂದರೆ ಅಮಾವಾಸ್ಯೆವರೆಗೆ ಕೃಷ್ಣಪಕ್ಷವು. ಶುಕ್ಲಪಕ್ಷದಲ್ಲಿ ಶುಭ ಕಾರ್ಯಗಳನ್ನು ಮಾಡಬಹುದೆಂದೂ, ಕೃಷ್ಣಪಕ್ಷದ ಪಂಚಮಿಯಿಂದ ಕ್ಷೀಣ ಚಂದ್ರನಾದ್ದರಿಂದ ಶುಭಕಾರ್ಯಗಳನ್ನು ಮಾಡಕೂಡದೆಂದೂ ತಿಳಿಯುವುದು.

## ತಿಥಿ ಪರಿಜ್ಞಾನ

➢ **ಪ್ರತಿಪಚ್ಚ ದ್ವಿತೀಯಾ ಚ ತೃತೀಯಾ ಚ ಚತುರ್ಥಿಕಾ ।**
**ಪಂಚಮೀಚ ತಥಾ ಷಷ್ಠೀ ಸಪ್ತಮೀ ಚಾಷ್ಟಮೀ ತಥಾ ॥ 13 ॥**
**ನವಮೀಸಾತಿಥಿಃ ಪ್ರೋಕ್ತಾ ದಶಮ್ಯೈಕಾದಶೀ ತಥಾ ।**
**ದ್ವಾದಶೀ ಚ ತಥಾ ಪ್ರೋಕ್ತಾ ತಥಾಚೈವತ್ರಯೋದಶೀ ॥ 14 ॥**
**ಪೂರ್ಣಿಮಾ ಚಾಪ್ಯಮಾವಾಸ್ಯಾ ತಿಥಯಃ ಷೋಡಶ ಸ್ಮೃತಾಃ ॥**

| | | | |
|---|---|---|---|
| 1. ಪಾಡ್ಯ | 2. ಬಿದಿಗೆ | 3. ತದಿಗೆ | 4. ಚತುರ್ಥಿ |
| 5. ಪಂಚಮಿ | 6. ಷಷ್ಠಿ | 7. ಸಪ್ತಮಿ | 8. ಅಷ್ಟಮಿ |

| 9. ನವಮಿ | 10. ದಶಮಿ | 11. ಏಕಾದಶಿ | 12. ದ್ವಾದಶಿ |
|---|---|---|---|
| 13. ತ್ರಯೋದಶಿ | 14. ಚತುರ್ದಶಿ | 15. ಪೂರ್ಣಿಮಾ | 30. ಅಮಾವಾಸ್ಯೆ |

ಎಂಬುದಾಗಿ ಶುಕ್ಲಪಕ್ಷದಲ್ಲಿ ಶುಕ್ಲಪ್ರತಿಪದಾದಿ ಪೂರ್ಣಿಮಾ ಪರ್ಯಂತ ಹದಿನೈದು ತಿಥಿಗಳೆಂದೂ, ಕೃಷ್ಣಪ್ರತಿಪದಾದಿ ಅಮಾವಾಸ್ಯೆ ಪರ್ಯಂತ ಹದಿನೈದು ತಿಥಿಗಳೆಂದೂ ತಿಳಿಯುವುದು.

## ವಾರ ಪರಿಜ್ಞಾನ

➤ ಭಾನುಶ್ಚ ಸೋಮವಾರಶ್ಚ ಮಂಗಳೋ ಬುಧಸಂಜ್ಞಕಃ ।
ಬೃಹಸ್ಪತಿಶ್ಶುಕ್ರಶನೀ ಸಪ್ತವಾರಾಃ ಪ್ರಕೀರ್ತಿತಾಃ ।।5।।

ತಾ ।। 1 ಭಾನುವಾರ 2. ಸೋಮವಾರ 3. ಮಂಗಳವಾರ 4. ಬುಧವಾರ 5. ಗುರುವಾರ 6. ಶುಕ್ರವಾರ 7. ಶನಿವಾರ ಎಂಬುದಾಗಿ ವಾರಕ್ಕೆ ಏಳು ದಿನಗಳು.

## ನಕ್ಷತ್ರ ಪರಿಜ್ಞಾನ

➤ ಅಶ್ವಿನೀ ಭರಣೀ ಚೈವ । ಕೃತ್ತಿಕಾ ರೋಹಿಣೀ ತಥಾ ।। 16 ।।
ಮೃಗಶೀರ್ಷಾಚ ಆರಿದ್ರಾ ತಥೈವ ಚ ಪುನರ್ವಸೂ ।
ಪುಷ್ಯಮಾಶ್ಲೇಷ ಪಿತೃಭಂ ಫಲ್ಗುನೀಚೋತ್ತರಾ ತಥಾ ।। 17 ।।
ಹಸ್ತ ಚಿತ್ತಾ ಸ್ವಾತಿಭಂ ಚ ವಿಶಾಖಾಭಿದಮೇವಚ ।
ಅನೂರಾಧಾ ಜೇಷ್ಠ ಮೂಲ ಪೂರ್ವಾಷಾಢಾಸ್ತಥೈವಚ ।। 18 ।।
ಉತ್ತರಾಷಾಢ ವಿಷ್ಣುಶ್ಚ ಧನಿಷ್ಠಾಶತತಾರಕಂ ।
ಪೂರ್ವಾಭಾದ್ರೋತ್ತರಾಭಾದ್ರ ರೇವತೀ ಋಕ್ಷ ಮೇವಚ ।। 19 ।।

| 1. ಅಶ್ವಿನಿ | 2. ಭರಣಿ | 3. ಕೃತ್ತಿಕಾ | 4. ರೋಹಿಣಿ | 5. ಮೃಗಶಿರ |
|---|---|---|---|---|
| 6. ಆರ್ದ್ರಾ | 7. ಪುನರ್ವಸು | 8 ಪುಷ್ಯಮಿ | 9. ಆಶ್ಲೇಷ | 10. ಮಖ |
| 11. ಪುಬ್ಬ | 12. ಉತ್ತರ | 13. ಹಸ್ತ | 14. ಚಿತ್ತಾ | 15. ಸ್ವಾತಿ |
| 16. ವಿಶಾಖಾ | 17. ಅನೂರಾಧ | 18. ಜ್ಯೇಷ್ಠ | 19. ಮೂಲ | 20. ಪೂರ್ವಾಷಾಢ |
| 21. ಉತ್ತರಾಷಾಢ | 22. ಶ್ರವಣ | 23. ಧನಿಷ್ಠ | 24. ಶತಭಿಷ | 25. ಪೂರ್ವಾಭಾದ್ರ |
| 26. ಉತ್ತರಾಭಾದ್ರ | 27. ರೇವತಿ. | | | |

ಈ ರೀತಿ ಇಪ್ಪತ್ತೇಳು ನಕ್ಷತ್ರಗಳು.

## ಯೋಗ ಪರಿಜ್ಞಾನ

➤ ವಿಷ್ಕಂಭಂ ಪ್ರೀತಿರಾಯುಷ್ಮಾನ್ ಸೌಭಾಗ್ಯಂ ಶೋಭನಸ್ತಥಾ ।
ಅತಿಗಂಡಃ ಸುಕುರ್ಮಾ ಚ ಧೃತಿಃ ಶೂಲಸ್ತಥೈವ ಚ ॥20॥
ಗಂಡೋವೃದ್ಧಿಃ ಧೃವಶ್ಚೈವ ವ್ಯಾಘಾತೋ ಹರ್ಷಣಸ್ತಥಾ ।
ವಜ್ರಂ ಸಿದ್ಧಿರ್ವ್ಯತೀಪಾತಾ ವರೀಯಾನ್ ಪರಘಶ್ಶಿವಃ ॥ 21 ॥
ಸಿದ್ಧಂ ಸಾಧ್ಯಂ ಶುಭಂ ಶುಕ್ಲ ಬ್ರಹ್ಮ ಐಂದ್ರಂ ಚ ವೈಧೃತಿಃ ।
ಏತೇ ಯೋಗಾಸ್ಸುವಿಜ್ಞೇಯಾಃ ಸಪ್ತವಿಂಶತಿ ಸಂಖ್ಯಕಾಃ ॥ 22 ॥

| | | |
|---|---|---|
| 1. ವಿಷ್ಕಂಭಯೋಗ | 2. ಪ್ರೀತಿಯೋಗ | 3. ಆಯುಷ್ಮಾನ್‌ಯೋಗ |
| 4. ಸೌಭಾಗ್ಯಯೋಗ | 5. ಶೋಭನಯೋಗ | 6. ಅತಿಗಂಡಯೋಗ |
| 7. ಸುಕರ್ಮಯೋಗ | 8. ಧೃತಿಯೋಗ | 9. ಶೂಲಯೋಗ |
| 10. ಗಂಡಯೋಗ | 11. ವೃದ್ಧಿಯೋಗ | 12. ಧ್ರುವಯೋಗ |
| 13. ವ್ಯಾಘಾತಯೋಗ | 14. ಹರ್ಷಣಯೋಗ | 15. ವಜ್ರಯೋಗ |
| 16. ಸಿದ್ಧಿಯೋಗ | 17. ವ್ಯತೀಪಾತಯೋಗ | 18. ವರೀಯಾನ್‌ಯೋಗ |
| 19. ಪರಿಘಯೋಗ | 20. ಶಿವನಾಮಯೋಗ | 21. ಸಿದ್ಧಯೋಗ |
| 22. ಸಾಧ್ಯಯೋಗ | 23. ಶುಭಯೋಗ | 24. ಶುಕ್ಲನಾಮಯೋಗ |
| 25. ಬ್ರಹ್ಮಯೋಗ | 26. ಐಂದ್ರಯೋಗ | 27. ವೈಧೃತಿಯೋಗ |

ಈ ಪ್ರಕಾರ ಇಪ್ಪತ್ತೇಳು ಯೋಗಗಳು.

## ಕರಣ ಪರಿಜ್ಞಾನ

➤ ಬವಶ್ಚೈಬಾಲವಶ್ಚೈವ ತೈತಿಲೋ ಗರಜೋ ವಣಿಕ್ ।
ಭದ್ರಂ ಚ ಶಕುನಿಶ್ಚೈವ ಚತುಷ್ಪಾನ್ನಾಗವಾಂಸ್ತಥಾ ॥ 23 ॥
ಕಿಂಸ್ತುಘ್ನಮಿತಿ ಚೈವೋಕ್ತಂ ಕರಣ್ಯೈಕಾದಶಂ ಸ್ಮೃತಮ್ ॥ 24 ॥

| | | |
|---|---|---|
| 1. ಬವಕರಣ | 2. ಬಾಲವಕರಣ | 3. ಕೌಲವಕರಣ |
| 4. ತೈತಿಲಕರಣ | 5. ಗರಜಕರಣ | 6. ವಣಿಕ್‌ಕರಣ |
| 7. ಭದ್ರಕರಣ | 8. ಶಕುನಿಕರಣ | 9. ಚತುಷ್ಪಾತ್‌ಕರಣ |
| 10. ನಾಗವಾನ್‌ಕರಣ | 11. ಕಿಂಸ್ತುಘ್ನಕರಣ | |

ಈ ಪ್ರಕಾರ ಹನ್ನೊಂದು ಕರಣಗಳು.

## ರಾಶಿ ಪರಿಜ್ಞಾನ

➤ **ಮೇಷೋ ವೃಷಭಶ್ಚ ಮಿಥುನಂ । ಕರ್ಕಃ ಸಿಂಹಶ್ಚ ಕನ್ಯಕಾ ।।25।।**
**ತುಲಾಚ ವೃಶ್ಚಿಕಶ್ಚೈವ ಧನುಶ್ಚ ಮಕರಸ್ತಥಾ ।**
**ಕುಂಭಶ್ಚೈವ ತಥಾ ಮೀನಶ್ಚೈತೇ ದ್ವಾದಶರಾಶಯಃ ।।26।।**

1. ಮೇಷರಾಶಿ 2. ವೃಷಭರಾಶಿ 3. ಮಿಥುನರಾಶಿ
4. ಕರ್ಕಾಟಕರಾಶಿ 5. ಸಿಂಹರಾಶಿ 6. ಕನ್ಯಾರಾಶಿ
7. ತುಲಾರಾಶಿ 8. ವೃಶ್ಚಿಕರಾಶಿ 9. ಧನುರಾಶಿ
10. ಮಕರರಾಶಿ 11. ಕುಂಭರಾಶಿ 12. ಮೀನರಾಶಿ

ಈ ಪ್ರಕಾರ ಹನ್ನೆರಡು ರಾಶಿಗಳು.

## ಗ್ರಹ ಪರಿಜ್ಞಾನ

➤ **ರವಿಶ್ಚಂದ್ರಃ ಕುಜಃ ಸೌಮ್ಯೋ ಗುರುಶುಕ್ರಶನೈಶ್ಚರಾಃ ।**
**ರಾಹುಃ ಕೇತುರಿತಿ ಪ್ರೋಕ್ತಾಃ ಜ್ಯೋತಿಶ್ಶಾಸ್ತ್ರೇ ನವಗ್ರಹಾಃ ।।27।।**

1. ಸೂರ್ಯ 2. ಚಂದ್ರ 3. ಅಂಗಾರಕ 4. ಬುಧ
5. ಗುರು 6. ಶುಕ್ರ 7. ಶನಿ 8. ರಾಹು
9. ಕೇತು – ಈ ಪ್ರಕಾರವಾಗಿ ನವಗ್ರಹಗಳನ್ನು ತಿಳಿಯಬಹುದು.

## ರಾಶ್ಯಾಧಿಪತಿತ್ವ ಪರಿಜ್ಞಾನ

➤ **ಸಿಂಹಾಸ್ಯಾಧಿಪತಿಃ ಸೂರ್ಯಃ ಕರ್ಕಟಸ್ಯ ನಿಶಾಕರಃ ।**
**ಮೇಷ ವೃಶ್ಚಿಕಯೋರ್ಭೌಮಃ ಕನ್ಯಾಮಿಥುನಯೋರ್ಬುಧಃ ।।28।।**

**ಧನುರ್ಮೀನದ್ವಯೋರ್ಗುರುಃ ತುಲಾವೃಷಭಯೋ ಭೃಗುಃ ।**
**ಮಕರೇ ಕುಂಭರಾಶೌಚ ನಾಯಕಸ್ಸೂರ್ಯನಂದನಃ ।।29।।**

**ತಾ।। ಸಿಂಹರಾಶಿಗೆ ಸೂರ್ಯನು, ಕರ್ಕಾಟಕ ರಾಶಿಗೆ ಚಂದ್ರನು, ಮೇಷ ವೃಶ್ಚಿಕ ರಾಶಿಗಳಿಗೆ ಅಂಗಾರಕನು, ಕನ್ಯಾ ಮಿಥುನ ರಾಶಿಗಳಿಗೆ ಬುಧನು, ಧನು ಮೀನ ರಾಶಿಗಳಿಗೆ ಗುರುವು, ತುಲಾ ವೃಷಭ ರಾಶಿಗಳಿಗೆ ಶುಕ್ರನು, ಮಕರ ಕುಂಭ ರಾಶಿಗಳಿಗೆ ಶನಿಯು, ಈ ಪ್ರಕಾರವಾಗಿ ಹನ್ನೆರಡು ರಾಶಿಗಳಿಗೆ ಸೂರ್ಯಾದಿ ಗ್ರಹಗಳು ಅಧಿಪತಿಗಳೆಂದು ತಿಳಿಯುವುದು.**

## ಮೇಷಾದಿ ಲಗ್ನ ಪ್ರಮಾಣಗಳು

➢ ರಾಮಾರಿದಾಸಾರಿಭಯಾಂಗರಾಗಗೋ
ನಾರಾಂಗ ಭಗ್ನಾಂಗ ಭನಾಂಗರಾಗಗಃ ।
ರಾಶಾಂಗ ಭೂಪಾಂಗ ಧನಾಂಗ ರಾಮರಾಟ್
ಮೇಷಾದಿಕಾನಾಂ ಕ್ರಮಶೋ ವಿನಾಡಿಕಾಃ॥30॥

ತಾ॥ ಮೇಷ ಪ್ರಮಾಣ 4-12, ವೃಷಭ ಪ್ರಮಾಣ 4-38, ಮಿಥುನ ಪ್ರಮಾಣ 5-14, ಕರ್ಕಾಟಕ ಪ್ರಮಾಣ 5-32, ಸಿಂಹ ಪ್ರಮಾಣ 5-20, ಕನ್ಯಾ ಪ್ರಮಾಣ 5-4, ತುಲಾ ಪ್ರಮಾಣ 5-4, ವೃಶ್ಚಿಕ ಪ್ರಮಾಣ 5-20, ಧನುಃ ಪ್ರಮಾಣ 5-32, ಮಕರ ಪ್ರಮಾಣ 5-14, ಕುಂಭ ಪ್ರಮಾಣ 4-38, ಮೀನ ಪ್ರಮಾಣ 4-12 – ಈ ಪ್ರಕಾರವಾಗಿ ಮೇಷಾದಿ ಲಗ್ನ ಪ್ರಮಾಣಗಳನ್ನು ತಿಳಿಯುವುದು.

## ಮೇಷಾದಿ ಲಗ್ನಭುಕ್ತಿ ನಿರ್ಣಯ

➢ ಧಾನಂ ಧೇನುಂ ಧೇನುಂ ನಯಂ ಕೂಟಂ ಕೂಟಂ ಜ್ಞೇಯಂ ಪಟು ಪಟುಂ॥
ಪಟುಂ ನಟಂ ಧನಂ ಧೇನಂ ಮೇಷಾದ್ಯಾರಾಶಿಭುಕ್ತಯಃ ॥ 31 ॥

ತಾ॥ ಮೇಷ 8, ವೃಷಭ 9, ಮಿಥುನ 10, ಕರ್ಕಾಟಕ 11, ಸಿಂಹ 11, ಕನ್ಯಾ 11, ತುಲಾ 10, ವೃಶ್ಚಿಕ 11, ಧನು 11, ಮಕರ 11, ಕುಂಭ 10, ಮೀನ 9 – ಈ ಪ್ರಕಾರವಾಗಿ ಪ್ರತಿ ಲಗ್ನದಲ್ಲಿಯೂ ಭುಕ್ತಿಗಳನ್ನು ತಿಳಿಯುವುದು.

## ಮೇಷಾದಿ ಸಂಕ್ರಮಣ ದಿನ ನಿರ್ಣಯ

➢ ಕುಲಂ ಕಾಲಂ ಫಲಂ ಯೋಗ್ಯಂ ಕುಂಡಂ ಪಾಂಡಂ ನಗಂ ಧರಂ ।
ನಿಂಬಾಧರಂ ನೀಲನಗಂ ಮೇಷಾದ್ಯಾದಿವಸಃ ಕ್ರಮಾತ್ ॥32॥

ತಾ॥ ಮೇಷಮಾಸ 30 ದಿನಗಳು, ವೃಷಭಮಾಸ 31 ದಿನಗಳು, ಮಿಥುನಮಾಸ 32 ದಿನಗಳು, ಕರ್ಕಾಟಕ ಮಾಸ 50 ದಿನಗಳು, ಸಿಂಹಮಾಸ 31 ದಿನಗಳು, ಕನ್ಯಾಮಾಸ 31 ದಿನಗಳು, ತುಲಾಮಾಸ 30 ದಿನಗಳು, ವೃಶ್ಚಿಕಮಾಸ 29 ದಿನಗಳು, ಧನುರ್ಮಾಸ 30 ದಿನಗಳು, ಮಕರಮಾಸ 29 ದಿನಗಳು, ಕುಂಭಮಾಸ 30 ದಿನಗಳು, ಮೀನಮಾಸ 30 ದಿನಗಳು – ಈ ರೀತಿಯಾಗಿ ಮೇಷಾದಿ ಮೀನಾಂತವಾಗಿಯೂ ಮಾಸಗಳಲ್ಲಿ ದಿನಗಳನ್ನು ತಿಳಿಯುವುದು.

## ಮೇಷಾದಿ ರಾಶಿಗಳಲ್ಲಿ ನಕ್ಷತ್ರ ಪರಿಜ್ಞಾನ

➢ ವಾಕ್ಯ ॥ ಅಶ್ವಿನಿ ಭರಣಿ ಕೃತ್ತಿಕಾಪಾದಂ ಮೇಷಂ ।ಕೃತ್ತಿಕಾಸ್ತ್ರಯಃ ಪಾದಂ ರೋಹಿಣಿ ಮೃಗಶಿರಾರ್ಧಂ ವೃಷಭಂ । ಮೃಗಶಿರಾರ್ಧಂ ಆರ್ದ್ರ ಪುನರ್ವಸುತ್ರಯೋಮಿಥುನಂ । ಪುನರ್ವಸುಚತುರ್ಥಂ ಪುಷ್ಯ ಆಶ್ಲೇಷಾಂತ್ಯಂ ಕರ್ಕಟಕಂ । ಮಖ ಪುಬ್ಬ ಉತ್ತರಾಪಾದಂ ಸಿಂಹಂ। ಉತ್ತರಾಸ್ತ್ರಯಃ ಪಾದಂ ಹಸ್ತ ಚಿತ್ತಾರ್ಧಂ ಕನ್ಯಾ । ಚಿತ್ತಾರ್ಧಂ ಸ್ವಾತಿ ವಿಶಾಖಾಸ್ತ್ರಯಸ್ತುಲಾ। ವಿಶಾಖಾಪಾದಂ ಅನೂರಾಧ ಜ್ಯೇಷ್ಠಾಂತಂ ವೃಶ್ಚಿಕಂ । ಮೂಲ ಪೂರ್ವಾಷಾಢ ಉತ್ತರಾಷಾಢಾ ಪಾದಂ ಧನುಃ । ಉತ್ತರಾಷಾಢಸ್ತ್ರಯಃ ಪಾದಂ ಶ್ರವಣ ಧನಿಷ್ಠಾರ್ಧಂ ಮಕರಂ । ಧನಿಷ್ಠಾರ್ಧಂ ಶತಭಿಷಪೂರ್ವಾಭಾದ್ರಾಸ್ತ್ರಯಃ ಕುಂಭಂ । ಪೂರ್ವಾಭಾದ್ರಪದಪಾದಂ ಉತ್ತರಾಭಾದ್ರ ರೇವತ್ಯಂತಂ ಮೀನಂ ॥

ತಾ॥ ಅಶ್ವಿನಿ 4 ಪಾದ, ಭರಣಿ 4 ಪಾದ, ಕೃತ್ತಿಕ 1 ಪಾದ ಸೇರಿ ಮೇಷರಾಶಿ. ಕೃತ್ತಿಕ 3 ಪಾದ, ರೋಹಿಣಿ 4 ಪಾದ, ಮೃಗಶಿರ 2 ಪಾದ ಸೇರಿ ವೃಷಭರಾಶಿ. ಮೃಗಶಿರ 2 ಪಾದ, ಆರ್ದ್ರಾ 4 ಪಾದ, ಪುನರ್ವಸು 3 ಪಾದ ಸೇರಿ ಮಿಥುನ ರಾಶಿ. ಪುನರ್ವಸು 1 ಪಾದ, ಪುಷ್ಯ 4 ಪಾದ, ಆಶ್ಲೇಷ 4 ಪಾದ ಸೇರಿ ಕರ್ಕಾಟಕ ರಾಶಿ. ಮಖ 4 ಪಾದ, ಪುಬ್ಬ 4 ಪಾದ, ಉತ್ತರ 1 ಪಾದ ಸೇರಿ ಸಿಂಹರಾಶಿ. ಉತ್ತರ 3 ಪಾದ, ಹಸ್ತ 4 ಪಾದ, ಚಿತ್ತ 2 ಪಾದ ಸೇರಿ ಕನ್ಯಾರಾಶಿ. ಚಿತ್ತ 2 ಪಾದ, ಸ್ವಾತಿ 4 ಪಾದ, ವಿಶಾಖ 3 ಪಾದ ಸೇರಿ ತುಲಾರಾಶಿ. ವಿಶಾಖ 1 ಪಾದ, ಅನೂರಾಧ 4 ಪಾದ, ಜ್ಯೇಷ್ಠ 4 ಪಾದ ಸೇರಿ ವೃಶ್ಚಿಕರಾಶಿ. ಮೂಲ 4 ಪಾದ, ಪೂರ್ವಾಷಾಢ 4 ಪಾದ, ಉತ್ತರಾಷಾಢ 1 ಪಾದ ಸೇರಿ ಧನುರಾಶಿ. ಉತ್ತರಾಷಾಢ 3 ಪಾದ, ಶ್ರವಣ 4 ಪಾದ, ಧನಿಷ್ಠ 2 ಪಾದ ಸೇರಿ ಮಕರರಾಶಿ. ಧನಿಷ್ಠ 2 ಪಾದ, ಶತಭಿಷ 4 ಪಾದ, ಪೂರ್ವಾಭಾದ್ರ 3 ಪಾದ ಸೇರಿ ಕುಂಭರಾಶಿ. ಪೂರ್ವಾಭಾದ್ರ 1 ಪಾದ, ಉತ್ತರಾಭಾದ್ರ 4 ಪಾದ, ರೇವತಿ 4 ಪಾದ ಸೇರಿ ಮೀನರಾಶಿ ಎಂಬುದಾಗಿ 27 ನಕ್ಷತ್ರಗಳಿಗೆ ನಕ್ಷತ್ರ ಒಂದಕ್ಕೆ 4 ಪಾದ ಪ್ರಕಾರ 108 ಪಾದಗಳಾಗಿರುತ್ತವೆ. ಮೇಷಾದಿ 12 ರಾಶಿಗಳಿಗೆ ಈ 27 ನಕ್ಷತ್ರಗಳನ್ನು ಸೇರಿಸಲು ರಾಶಿ ಒಂದಕ್ಕೆ 9 ಪಾದಗಳಾಗುತ್ತವೆ ಎಂಬುದಾಗಿ ಮೇಷಾದಿ ರಾಶಿಗಳಲ್ಲಿ ನಕ್ಷತ್ರಗಳನ್ನು ತಿಳಿಯುವುದು.

## ನಾಮನಕ್ಷತ್ರ ವಿವೇಕ

➢ ಅಶ್ವಿನೀತು ಚೂಚೇಚೋಲಾ । ಲೀಲೂಲೇಲೋ ಭರಣ್ಯಪಿ । ಕೃತ್ತಿಕಾಸ್ಯಾ ಅಇಉಏ । ರೋಹಿಣ್ಯೋ ಓವಾವೀವೂ ಛಾಸ್ಮೃತಾ ।। ವೇವೋಕಾಕಿ ಮೃಗಶಿರಾದ್ರಾ । ಕೂಕಂಙ್ಛಥಾ ಪ್ರಕೀರ್ತಿತಾಃ ।। ಕೇಕೋಹಾಹಿ ಪುನರ್ಭಂಸ್ಯಾತ್ ಹೂಹೇಹೋಡಾ ಚ ಪುಷ್ಯಭೋ ।। ಆಶ್ಲೇಷಾತು ಡಿಡೂಡೇಡೋ ಮಾಮಿಮೂಮೇ ಮುಖಾಹ್ವಯಂ । ಮೋಟಾಟೀಟೂ ತು ಪುಬ್ಬಾಖ್ಯಾ । ಟೇಟೋಪಾಪೀ ಚ ಉತ್ತರಾ । ಪೂಷಂಣಾಢೇತಿ ಹಸ್ತಸ್ಯ ।ಪೇಪೋರಾರೀತಿ ಚಿತ್ರಕಾ ।। ರೂರೇರೋತಾ ತಥಾ ಸ್ವಾತೀ । ತೀತೂತೇತೋ ವಿಶಾಖಿಕಾ ।। ನಾನೀನೂನೇಹ್ಯನೂರಾಧಾ । ನೋಯಾಯಿಯೂತಂ ಜ್ಯೇಷ್ಠಕಾ ।। ಏಯೋಬಾಬೀ ಮೂಲಭಂಚ । ಪೂರ್ವಾಷಾಢಾ ಬುಧಾಫಢಾ ।। ಬೇಬೋಬಾ-ಬ್ಯುತ್ತರಾಷಾಢಾ । ಶಿಶುಶೇಶೂ ಶ್ರವಣಭಂಚ । ಜೂಜೇಜೊಖಸ್ತಥಾಭಿಜಿತ್ ।। ಗಾಗೀಗೂಗೇ ಧನಿಷ್ಠಕಾ । ಗೋಸಾಸೀಸೂ ಶತಾಖ್ಯಂತು । ಸೇಸೋದಾದಿ ಪುಭಾಮತಾ ।। ದುಶಂಜಾಥೋತ್ತರಾಭಾದ್ರಾ । ದೇದೊಚಾಚೀತಿ ರೇವತೀ ।।47।।

ತಾ।। 1. ಚೂಚೆಚೋಲಾ ಅಶ್ವಿನಿ, 2. ಲೀಲೂಲೇಲೊ ಭರಣಿ, 3. ಅಇಉಎ ಕೃತ್ತಿಕ, 4. ಓವಾವಿವೂ ರೋಹಿಣಿ, 5. ವೇವೊಕಾಕಿ ಮೃಗಶಿರ, 6. ಕೂಕಂಙ್ಛಥ ಆರಿದ್ರಾ, 7. ಕೆಕೊಹಾಹಿ ಪುನರ್ವಸು, 8. ಹುಹೆಹೋಢಾ ಪುಷ್ಯಮಿ, 9. ಡಿಡುಡೆಡೋ ಆಶ್ಲೇಷ, 10. ಮಾಮಿಮೂಮೆ ಮಖ, 11. ಮೋಟಾಟೀಟೂ ಪುಬ್ಬ, 12. ಟೇಟೋಪಾಪೀ ಉತ್ತರ, 13. ಪೂಷಂಣಾಢ ಹಸ್ತ, 14. ಪೇಪೋರಾರಿ ಚಿತ್ತ, 15. ರೂರೇರೋತಾ ಸ್ವಾತಿ, 16. ತೀತೂತೇತೊ ವಿಶಾಖ, 17. ನಾನೀನೂನೆ ಅನುರಾಧ, 18. ನೋಯಾಯಿಯು ಜ್ಯೇಷ್ಠ, 19. ಏಯೊಬಾಬೀ ಮೂಲ, 20. ಬುಧಾಫಢಾ ಪೂರ್ವಾಷಾಢ, 21. ಬೇಬೊಬಾಬು ಉತ್ತರಾಷಾಢ, 22. ಶಿಶುಶೇಶೊ ಶ್ರವಣ, 23. ಗಾಗೀಗೂಗೆ ಧನಿಷ್ಠ, 24 ಗೋಸಾಸೀಸೂ ಶತಭಿಷ, 25. ಸೇಸೊದಾದಿ ಪೂರ್ವಾಭಾದ್ರ, 26. ದುಶಂಜಾಥ ಉತ್ತರಾಭಾದ್ರ, 27. ದೇದೊಚಾಚಿ ರೇವತಿ – ಎಂಬುದಾಗಿ ನಾಮನಕ್ಷತ್ರಗಳನ್ನು ತಿಳಿಯತಕ್ಕವರು ನಾಮಾಕ್ಷರದ ಮೊದಲನೆ ವರ್ಣದಿಂದ ಆಯಾಯ ನಕ್ಷತ್ರ ಪಾದಗಳನ್ನು ತಿಳಿಯತಕ್ಕದ್ದು.

## ಚಂದ್ರಬಲ ತಿಳಿಯುವ ಕ್ರಮ

➢ ಸ್ವಜನ್ಮರಾಶಿಮಾರಭ್ಯ ಚಂದ್ರರಾಶಿಸ್ಥಿತಂ ಫಲಂ ।
ಚಂದ್ರೇ ಜನ್ಮನಿ ಪುಷ್ಟಿಶ್ಚ ದ್ವಿತೀಯೇ ನ ಸುಖಂ ಭವೇತ್ ॥48॥
ತೃತೀಯೇ ಧನಲಾಭಶ್ಚ ಚತುರ್ಥೇ ರೋಗಸಂಭವಃ ।
ಪಂಚಮೇ ಕಾರ್ಯನಾಶಶ್ಚ ಷಷ್ಠೇ ದ್ರವ್ಯಾಗಮೋ ಮಹಾನ್ ॥49॥
ಸಪ್ತಮೇ ಭೂಪಸನ್ಮಾನಂ ಅಷ್ಟಮೇ ಮರಣಂ ಧ್ರುವಂ ।
ನವಮೇ ಚ ಭಯಂ ಜ್ಞೇಯಂ ದಶಮೇ ಕಾರ್ಯಸಂಪದಃ ।
ಏಕಾದಶೇರ್ಥಲಾಭಶ್ಚ ದ್ವಾದಶೇ ವಿವಿಧಾಪದಃ ॥50॥

ತಾ॥ ತನ್ನ ಜನ್ಮರಾಶಿಯಿಂದ ಚಂದನಿಗಿರುವ ರಾಶಿಪರ್ಯಂತರಕ್ಕು ಎಣಿಸಿ, ಜನ್ಮರಾಶಿಯಲ್ಲಿದ್ದರೆ ಪುಷ್ಟಿ, ದ್ವಿತೀಯದಲ್ಲಿದ್ದರೆ ಸುಖವಿಲ್ಲ, ತೃತೀಯದಲ್ಲಿದ್ದರೆ ಧನಲಾಭ, ಚತುರ್ಥದಲ್ಲಿದ್ದರೆ ರೋಗಸಂಭವ, ಪಂಚಮದಲ್ಲಿದ್ದರೆ ಕಾರ್ಯನಾಶ, ಷಷ್ಠದಲ್ಲಿದ್ದರೆ ದ್ರವ್ಯಲಾಭ, ಸಪ್ತಮದಲ್ಲಿದ್ದರೆ ಭೂಪಸನ್ಮಾನ, ಅಷ್ಟಮದಲ್ಲಿದ್ದರೆ ಮೃತ್ಯುಪ್ರದ, ನವಮದಲ್ಲಿದ್ದರೆ ಭಯ, ದಶಮದಲ್ಲಿದ್ದರೆ ಕಾರ್ಯಸಿದ್ಧಿ, ಏಕಾದಶದಲ್ಲಿದ್ದರೆ ಧನಲಾಭ, ದ್ವಾದಶದಲ್ಲಿದ್ದರೆ ಆಪತ್ತು – ಈ ಪ್ರಕಾರವಾಗಿ ಚಂದ್ರಬಲವನ್ನು ತಿಳಿಯುವುದು.

## ತಾರಾಬಲ ವಿವರ

➢ ಜನ್ಮಭಾದ್ದಿನಭಂ ಯಾವತ್ತಾರಾಜ್ಞೇಯಾ ನವೋದ್ಧೃತಾ ॥50॥

• ತಾ ॥ ಜನ್ಮನಕ್ಷತ್ರ ಮೊದಲು ನಿತ್ಯನಕ್ಷತ್ರದವರೆಗೆ ಎಣಿಸಿ, 9ರಿಂದ ಭಾಗಿಸಿದ ಶೇಷವನ್ನು ತಿಳಿಯುವುದು.

➢ ಜನ್ಮಸಂಪದ್ವಿಪತ್ಕ್ಷೇಮಃ ಪ್ರತ್ಯಕ್ ಸಾಧನ ನೈಧನಂ ।
ಮಿತ್ರಂ ಪರಮಮೈತ್ರಂ ಚ । ನವತಾರಾಃ ಪ್ರಕೀರ್ತಿತಾಃ ॥52॥

ತಾ ॥ ನಿಂತ ಶೇಷ 1ಕ್ಕೆ ಜನ್ಮತಾರೆ, 2ಕ್ಕೆ ಸಂಪತ್ತಾರೆ, 3ಕ್ಕೆ ವಿಪತ್ತಾರೆ, 4ಕ್ಕೆ ಕ್ಷೇಮತಾರೆ, 5ಕ್ಕೆ ಪ್ರತ್ಯಕ್ತಾರೆ, 6ಕ್ಕೆ ಸಾಧನತಾರೆ, 7ಕ್ಕೆ ನೈಧನತಾರೆ, 8ಕ್ಕೆ ಮಿತ್ರತಾರೆ, 9ಕ್ಕೆ ಪರಮಮೈತ್ರತಾರೆ ಎಂಬುದಾಗಿ ತಾರಾಬಲವನ್ನು ಕಂಡುಹಿಡಿಯುವುದು.

## ತಾರೆಗಳ ಫಲ ವಿವರ

➤ ಜನ್ಮತೋ ದೇಹನಾಶಸ್ಯಾತ್ । ಸಂಪತ್ಸಂಪದಮೇವಚ ॥
ವಿಪತ್ತಾರಾ ಕಾರ್ಯನಾಶಂ । ಕ್ಷೇಮಂ ಕ್ಷೇಮಕರಂ ಭವೇತ್ ॥53॥
ಪ್ರತ್ಯಕ್ತಾರಾ ಕಾರ್ಯನಾಶಃ ಸಾಧನೇ ಕಾರ್ಯಸಾಧನಂ ॥
ನೈಧನೆ ನಿಧನಂ ವಿಂದ್ಯಾತ್ । ಮಿತ್ರೇ ಮಿತ್ರಪ್ರವರ್ಧನಂ ॥54॥
ಪರಮರ್ಕ್ಷೇ ಪುತ್ರಲಾಭಃ ತಾರಾಫಲಮಿದಂ ಕ್ರಮಾತ್ ॥55॥

ತಾ॥ ಜನ್ಮತಾರೆಯಲ್ಲಿ ದೇಹಾಲಸ್ಯ, ಸಂಪತ್ತಾರೆಯಲ್ಲಿ ಸಂಪತ್ತು ಅಭಿವೃದ್ಧಿ, ವಿಪತ್ತಾರೆಯಲ್ಲಿ ಕಾರ್ಯನಾಶ, ಕ್ಷೇಮತಾರೆಯಲ್ಲಿ ಕ್ಷೇಮಕರ, ಪ್ರತ್ಯಕ್ತಾರೆಯಲ್ಲಿ ಕಾರ್ಯನಾಶ, ಸಾಧನತಾರೆಯಲ್ಲಿ ಕಾರ್ಯಸಾಧನೆ, ನೈಧನತಾರೆಯಲ್ಲಿ ಮೃತ್ಯು, ಮಿತ್ರತಾರೆಯಲ್ಲಿ ಮಿತ್ರರ ಸಂಸರ್ಗ, ಸಂತೋಷ, ಪರಮಮೈತ್ರತಾರೆಯಲ್ಲಿ ಪುತ್ರಲಾಭ ಎಂಬುದಾಗಿ ಒಂಬತ್ತು ತಾರೆಗಳಿಗೂ ಫಲವನ್ನು ತಿಳಿಯುವುದು.

## ತಾರಾದಾನ ವಿವರ

➤ ಶಾಕಂ ಗುಡಂ ಚ ಲವಣಂ ಸತಿಲಂ ಕಾಂಚನಂ ತಥಾ ।
ದಾನೇನಾನೇನ ಸರ್ವೇಷಾಂ ತಾರಾದೋಷೋ ನ ವಿದ್ಯತೇ ॥56॥

ತಾ॥ ಜನ್ಮತಾರೆಯಲ್ಲಿ ಶಾಕದಾನ, ವಿಪತ್ತಾರೆಯಲ್ಲಿ ಬೆಲ್ಲದಾನ, ಪ್ರತ್ಯಕ್ತಾರೆಯಲ್ಲಿ ಉಪ್ಪುದಾನ, ನೈಧನತಾರೆಯಲ್ಲಿ ಎಳ್ಳುದಾನ, ಪರಮಮೈತ್ರತಾರೆಯಲ್ಲಿ ಸುವರ್ಣದಾನ ಮಾಡಿದಲ್ಲಿ ತದ್ದೋಷ ಪರಿಹಾರವಾಗುವುದು.

## ತಾರಾ ವಿಷಯಕ ಪರ್ಯಾಯಃ

➤ ಪ್ರಥಮೇಪ್ರಥಮಂ ವರ್ಜ್ಯಂ ದ್ವಿತೀಯೇಚ ತೃತೀಯಕಂ ।
ತೃತೀಯೇ ಪಂಚಮಂ ವರ್ಜ್ಯ ನೈಧನಂ ತ್ರಿಷು ವರ್ಜಯೇತ್ ॥57॥

ತಾ॥ ಜನ್ಮನಕ್ಷತ್ರದಿಂದ ನಿತ್ಯನಕ್ಷತ್ರವು 9ರ ಒಳಗಿದ್ದರೆ ಪ್ರಥಮ ಪರ್ಯಾಯ ವೆನಿಸಿಕೊಳ್ಳುತ್ತದೆ. ಇದರಲ್ಲಿ ಜನ್ಮತಾರೆ ನಿಂದ್ಯವಾದುದು. ತನ್ನ ಜನ್ಮನಕ್ಷತ್ರದಿಂದ ನಿತ್ಯನಕ್ಷತ್ರ 9ರ ಮೇಲೆ 18ರ ಒಳಗಿದ್ದರೆ ದ್ವಿತೀಯ ಪರ್ಯಾಯ ಎನ್ನಿಸಿಕೊಳ್ಳುತ್ತದೆ. ಇದರಲ್ಲಿ ವಿಪತ್ತಾರೆ ನಿಂದ್ಯವಾದುದು. ಜನ್ಮನಕ್ಷತ್ರದಿಂದ ನಿತ್ಯನಕ್ಷತ್ರವು 18ರ ಮೇಲೆ 27ರ ಒಳಗಿದ್ದರೆ ತೃತೀಯ

ಪರ್ಯಾಯವೆನ್ನಿಸಿಕೊಳ್ಳುತ್ತದೆ. ಇದರಲ್ಲಿ ಪ್ರತ್ಯಕ್ತಾರೆ ನಿಂದ್ಯವಾದುದು. ಈ ಮೂರು ಪರ್ಯಾಯಗಳಲ್ಲಿಯೂ ನೈಧನತಾರೆಯು ಸರ್ವತ್ರ ನಿಷಿದ್ಧವಾಗಿರುವುದೆಂದು ತಿಳಿಯುವುದು.

## ತಾರಾಧಿಪತಿಗಳ ಫಲ ವಿವರ

➢ ಜನ್ಮನ ಆರ್ಕೇ ಹಿಮಕರತನಯೇ ಸೈಹಂಕೇಯೇ ಸುರೇಜ್ಯೇ ||
ಕೇತುಶ್ಚಂದ್ರೋ ದಿನಕರಸುತೋ । ಭಾರ್ಗವೋ ಭೂಮಿಪುತ್ರಃ ||
ತಾಪಂ ಕಾಂತಿಂ ಮೃತಿಧೃತಿಲಯಃ ಕೀರ್ತಿಹಾನಿಃ ಪ್ರಮೋದೋ ||
ವ್ಯಾಧಿಸ್ತಾರಾ ಫಲಮಿತಿ ಬುಧಾಸ್ಸಂವದಂತಿ ಕ್ರಮೇಣ ||58||

ತಾ|| ಜನ್ಮತಾರೆಗೆ ಸೂರ್ಯನಾದ್ದರಿಂದ ಜ್ವರವೆಂತಲೂ, ಸಂಪತ್ತಾರೆಗೆ ಬುಧನು ಕಾಂತಿಪ್ರದನೆಂತಲೂ, ವಿಪತ್ತಾರೆಗೆ ರಾಹು ಮರಣಪ್ರದನೆಂತಲೂ, ಕ್ಷೇಮತಾರೆಗೆ ಗುರುವು ಧೈರ್ಯಪ್ರದನೆಂತಲೂ, ಪ್ರತ್ಯಕ್ತಾರೆಗೆ ಕೇತುವು ನಷ್ಟಪ್ರದನೆಂತಲೂ, ಸಾಧನತಾರೆಗೆ ಚಂದ್ರನು ಕೀರ್ತಿಪ್ರದನೆಂತಲೂ, ನೈಧನತಾರೆಗೆ ಶನಿಯು ಕಾರ್ಯಹಾನಿಪ್ರದನೆಂತಲೂ, ಮಿತ್ರತಾರೆಗೆ ಶುಕ್ರನು ಮನಸ್ಸಂತೋಷಪ್ರದನೆಂತಲೂ, ಪರಮಮೈತ್ರತಾರೆಗೆ ಅಂಗಾರಕನು ರೋಗಪ್ರದನೆಂತಲೂ – ಈ ಪ್ರಕಾರ ತಾರೆಗಳಿಗೆ ಹೇಳಿರುವ ಗ್ರಹಗಳು ಫಲವನ್ನು ಕೊಡತಕ್ಕವರೆಂದು ತಿಳಿಯುವುದು.

## ತಾರೆಗಳ ವಾಹನ ವಿವರ

➢ ರಾಸಭಸ್ಸೈಂಧವೋ ಹಸ್ತೀ ಮಹಿಷೋ ಜಂಬುಕೋಹರಿಃ ।
ಕಾಕೋ ಮಯೂರೋ ಹಂಸಶ್ಚ ನವೈತೇ ತಾರವಾಹನಾಃ ||59||

ತಾ|| ಜನ್ಮತಾರೆಗೆ ಕತ್ತೆ, ಸಂಪತ್ತಾರೆಗೆ ಕುದುರೆ, ವಿಪತ್ತಾರೆಗೆ ಆನೆ, ಕ್ಷೇಮತಾರೆಗೆ ಕೋಣ, ಪ್ರತ್ಯಕ್ತಾರೆಗೆ ನರಿ, ಸಾಧನತಾರೆಗೆ ಸಿಂಹ, ನೈಧನತಾರೆಗೆ ಕಾಗೆ, ಮಿತ್ರತಾರೆಗೆ ನವಿಲು, ಪರಮಮೈತ್ರತಾರೆಗೆ ಹಂಸವೆಂಬುದಾಗಿ ಈ ಪ್ರಕಾರ ಒಂಬತ್ತು ವಾಹನಗಳನ್ನು ತಿಳಿಯುವುದು.

## ತಿಥಿದೋಷ ವೃದ್ಧಿದೋಷ ವಿಚಾರ

➢ ತಿಥೀನಾಂ ತ್ರಿತಯೋವಾರೋ ಏಕಸ್ಪೃಶತಿ ಯತ್ರವೈ ।
ಅವಮಂ ತದ್ದಿನಂ ಜ್ಞೇಯಂ ಶುಭಕರ್ಮಸು ಸಂತ್ಯಜೇತ್ ||60||
ವಾರಾಣಾಂ ತ್ರಿತಯಂ ಯಥಾ ತಿಥಿರೇಕಾ ಸ್ಪೃಶೇದ್ಯದಾ ||
ತ್ರಿದ್ಯುಸ್ಪೃಗಿತಿ ವಿಖ್ಯಾತಂ ನ ಗ್ರಾಹ್ಯಾ ಮಂಗಳಾದಿಷು ||61||

ತಾ|| ಒಂದು ವಾರದಲ್ಲಿ ಮೂರು ತಿಥಿಗಳು ಸೇರಿದ ದಿನವನ್ನು ಅವಮದಿವನೆನ್ನುವರು. ಅವಮದಿನವು ಶುಭಕರ್ಮನಿಂದ್ಯವಾಗಿರುವುದು. ಹಾಗೆಯೇ ಒಂದು ತಿಥಿಯಲ್ಲಿ ಮೂರು ವಾರಗಳು ಸೇರಿದ ದಿನವನ್ನು ತ್ರಿದನಸ್ಪೃಕ್ ದಿನವೆಂದೂ, ಇದೂ ಕೂಡ ಶುಭಕರ್ಮ ನಿಂದ್ಯವೆಂದು ತಿಳಿಯುವುದು.

## ಗುರು - ಶುಕ್ರ - ಚಂದ್ರರ ಬಾಲ-ವೃದ್ಧತ್ವ ವಿವರ

➢ ಶುಕ್ರಶ್ಶಕ್ರದಿಗುದ್ಗತಸ್ತ್ರಿದಿವಸೇ ಬಾಲೋ ದಶಾಹೇ ಪರೇ ||
ಪಕ್ಷೇವೃದ್ಧ ಇತಿ ಕ್ರಮಾದ್ದಶದಿನೇ ಪಂಚಾಹಮೇ ವಾಥವಾ |
ಪಕ್ಷೇ ಚೋಭಯಕೇ ಗುರುಃ ಪರಮತಶ್ಶುಕ್ರೇಜ್ಯಸ್ತದ್ವಯೇ |
ಪಂಚಾಹಂತು ದಿನತ್ರಯೇರ್ಧ ದಿವಸೇ ವೃದ್ಧಶ್ಶಿಶುಸ್ಯಾಚ್ಛಶೀ ||62||

ತಾ|| ಶುಕ್ರನು ಪೂರ್ವದಿಕ್ಕಿನಲ್ಲಿ ಉದಯಿಸಿದ ನಂತರ 3 ದಿವಸದವರೆವಿಗೂ, ಪಶ್ಚಿಮದಿಕ್ಕಿನಲ್ಲಿ ಉದಯಿಸಿದ ನಂತರ 10 ದಿವಸದವರೆವಿಗೂ ಬಾಲನಾಗಿರುವನು. ಪಶ್ಚಿಮದಿಕ್ಕಿನಲ್ಲಿ ಅಸ್ತಮಿಸುವುದಕ್ಕೆ ಮುಂಚೆ 13 ದಿನಗಳೂ, ಪೂರ್ವದಿಕ್ಕಿನಲ್ಲಿ ಅಸ್ತಮಿಸುವುದಕ್ಕೆ ಮುಂಚೆ 15 ದಿನಗಳು ವೃದ್ಧನಾಗಿರುವನು. ಗುರುವು ಪೂರ್ವ ದಿಕ್ಕಿನಲ್ಲಿ ಉದಯಿಸಿದ ನಂತರ 5 ದಿನಗಳವರೆಗೆ ಬಾಲನು. ಪಶ್ಚಿಮ ದಿಕ್ಕಿನಲ್ಲಿ ಅಸ್ತಮಿಸಿದ 15 ದಿನಗಳವರೆಗೆ ವೃದ್ಧನು. (ಗುರು, ಶುಕ್ರರು ಉದಯಾಸ್ತಮಾನಗಳಲ್ಲಿ ಐದೈದು ದಿನಗಳು ಪೂರ್ವಾಪರಗಳಲ್ಲಿ ಬಾಲತ್ವ ವೃದ್ಧತ್ವವೆಂದು ಕೆಲವರು ಅಭಿಪ್ರಾಯಪಡುವರು.) ಚಂದ್ರನು ಶುಕ್ಲಪಾಡ್ಯಮಿ ಕೊನೆ ಮೊದಲು ದ್ವಿತೀಯಾ 30 ಘಳಿಗೆಗಳವರೆಗೆ ಬಾಲನಾಗಿಯೂ, ಕೃಷ್ಣದ್ವಾದಶಿ ಮೊದಲು ಚತುರ್ದಶಿ ಅಂತ್ಯದವರೆವಿಗೆ ವೃದ್ಧನಾಗಿಯೂ ಇರುವನೆಂದು ತಿಳಿಯುವುದು.

## ಸಂಕ್ರಮಣ ಫಲ

➢ ಜನ್ಮನಕ್ಷತ್ರಮಾರಭ್ಯ ಯಾವತ್ಸಂಕ್ರಾಂತಿಋಕ್ಷಕಂ |
ಸಪ್ತಭಿರ್ಗುಣಿತಂ ಕೃತ್ವಾ ಅಷ್ಟಭಿರ್ಭಾಗಮಾಹರೇತ್ ||63||
ರೋಗೋಲಾಭಸ್ತಥಾದ್ಯೈಚ ಬಂಧನಂ ಧನಮೇವಚ |
ಸೌಖ್ಯಂ ದ್ರವ್ಯವಿನಾಶಸ್ಸ್ಯಾದಪಮೃತ್ಯುಸ್ತಥೈವಚ ||64||

ತಾ|| ಜನ್ಮನಕ್ಷತ್ರ ಮೊದಲು ಪ್ರತಿ ಸಂಕ್ರಮಣ ಪ್ರವೇಶದಲ್ಲಿರುವ ನಕ್ಷತ್ರದವರೆವಿಗೂ ಎಣಿಸಿ, ಆ ಮೊತ್ತವನ್ನು 7 ರಿಂದ ಗುಣಿಸಿ, 8 ರಿಂದ ಭಾಗಿಸಿ ಶೇಷವು 1 ನಿಂತರೆ ರೋಗವು,

2 ನಿಂತರೆ ಲಾಭವು, 3 ನಿಂತರೆ ಪ್ರಯಾಣವು, 4 ನಿಂತರೆ ಬಂಧನ, 5 ನಿಂತರೆ ಧನಲಾಭ, 6 ನಿಂತರೆ ಸೌಖ್ಯ, 7 ನಿಂತರೆ ದ್ರವ್ಯನಷ್ಟ, 8 ನಿಂತರೆ ಅಪಮೃತ್ಯು ಎಂಬುದಾಗಿ ತಿಳಿಯುವುದು.

## ಜನ್ಮನಕ್ಷತ್ರ ವಾರಫಲ

➤ ರಥ್ಯಾಭೋಜನಮಾಲಸ್ಯಂ ವಿದ್ಯಾ ವಸ್ತ್ರಂ ತಥೈವ ಚ ।
ಸ್ತ್ರೀಸಂಭೋಗ ಮೃತಿಶ್ಚೈವ ಭಾನುವಾರಾದಿಷು ಕ್ರಮಾತ್ ॥65॥

ತಾ॥ ಜನ್ಮನಕ್ಷತ್ರಕ್ಕೆ ಭಾನುವಾರ ಸೇರಿದರೆ ಪ್ರಯಾಣ, ಸೋಮವಾರ ಮೃಷ್ಟಾನ್ನ ಭೋಜನ, ಮಂಗಳವಾರ ಸೇರಿದರೆ ಆಲಸ್ಯ, ಬುಧವಾರ ಸೇರಿದರೆ ವಿದ್ಯಾಪ್ರಾಪ್ತಿ, ಗುರುವಾರ ಸೇರಿದರೆ ವಸ್ತ್ರಲಾಭ, ಶುಕ್ರವಾರ ಸೇರಿದರೆ ಸ್ತ್ರೀ ಸಂಭೋಗ, ಶನಿವಾರ ಮೃತ್ಯುಪ್ರದವೆಂದು ಜನ್ಮನಕ್ಷತ್ರ ವಾರಫಲವನ್ನು ಈ ಪ್ರಕಾರ ತಿಳಿಯುವುದು.

## ಮಾಸಫಲ ವಿವರ

➤ ಯದಾದಿ ಶುಕ್ಲೇ ಪ್ರತಿಪತ್ಸು ಋಕ್ಷಂ
ತದಾದಿ ಕೃತ್ವಾ ನಗರಭಾಗಶೇಷಂ ।
ಪಂಥಾ ಸುಭೋಜ್ಯಂ ತನುತಾಪ ಶೌರ್ಯೇ
ವಿದ್ಯಾಚ ವಸ್ತ್ರಂ ವಿಪುಲಂ ವಿಶೋಕಂ ॥66॥

ತಾ॥ ಚೈತ್ರಮಾಸಾದಿಯಾಗಿ ಹನ್ನೆರಡು ತಿಂಗಳುಗಳಲ್ಲಿಯೂ ಶುಕ್ಲಪಾಡ್ಯ ಯಾವ ನಕ್ಷತ್ರವೋ ತಿಳಿದು ಆ ನಕ್ಷತ್ರದಿಂದ ಜನ್ಮನಕ್ಷತ್ರ ಅಥವಾ ನಾಮನಕ್ಷತ್ರ ಪರ್ಯಂತಕ್ಕೂ ಎಣಿಸಿ, ಒಂಭತ್ತರಿಂದ ಭಾಗಿಸಿ ನಿಂತ ಶೇಷ 1 ಉಳಿದರೆ ಪ್ರಯಾಣ, 2 ನಿಂತರೆ ಸುಖಭೋಜನ, 3 ನಿಂತರೆ ತನುತಾಪ, 4 ನಿಂತರೆ ಶೌರ್ಯ, 5 ನಿಂತರೆ ವಿದ್ಯಾಪ್ರದ, 6 ನಿಂತರೆ ವಸ್ತ್ರಲಾಭ, 7 ನಿಂತರೆ ಭಂಗವು, 8 ನಿಂತರೆ ಸಂತೋಷ, 9 ನಿಂತರೆ ಪುಣ್ಯವೆಂಬುದಾಗಿ ಈ ಪ್ರಕಾರ ಪ್ರತಿ ತಿಂಗಳಲ್ಲಿಯೂ ನೋಡಿ ತಿಳಿದುಕೊಳ್ಳುವುದು.

## ನಿತ್ಯಗ್ರಹ ದಶಾವಿವರ

➤ ಜನ್ಮತಾರಾ ಚತುರ್ಗುಣ್ಯಂ ತಿಥಿ ವಾರೇಣ ಸಂಯುತಂ ॥
ನವಭಿಸ್ತು ಹರೇದ್ಭಾಗಂ ನಿತ್ಯಗ್ರಹಫಲಂ ಭವೇತ್ ॥67॥

ತಾ|| ಜನ್ಮನಕ್ಷತ್ರ ಮೊದಲು ನಿತ್ಯನಕ್ಷತ್ರದವರೆಗೂ ಎಣಿಸಿ ಮೊತ್ತವು ಎಷ್ಟಾಗುವುದೋ ಆ ಮೊತ್ತವನ್ನು 4 ರಿಂದ ಗುಣಿಸಿ ಅದಕ್ಕೆ ತಿಥಿವಾರ ಸಂಖ್ಯೆಗಳನ್ನು ಸೇರಿಸಿ 9 ರಿಂದ ಭಾಗಿಸಲು ಉಳಿಯುವುದೇ ರವಿಯಾದಿ ನಿತ್ಯಗ್ರಹ ದೆಶೆಯಾಗುವುದು.

➤ **ಭಾನುನಾ ಶೋಕಸಂತಾಪಂ ಶಶಾಂಕಾತ್ ಕ್ಷೇಮಮೇವಚ |**
**ಭೂಸುತಾನ್ಮೃತ್ಯುಮಾಪ್ನೋತಿ ಬುಧೇನ ಪ್ರಜ್ಞವಾನ್ ಭವೇತ್ ||**
**ಗುರೋರ್ಲಾಭಂ ಭೃಗೋಸೌಖ್ಯಂ ಸೂರ್ಯಪುತ್ರಾನ್ಮಹದ್ಭಯಂ |**
**ರಾಹುಣಾ ಕಲಹಶ್ಚೈವ ಕೇತುರ್ಮೃತ್ಯುರ್ನಸಂಶಯಃ ||68||**

ತಾ|| 1 ಉಳಿದರೆ ಸೂರ್ಯದಶಾ ಸಂತಾಪ, 2. ಉಳಿದರೆ ಚಂದ್ರದಶಾ ಕ್ಷೇಮ, 3. ಉಳಿದರೆ ಅಂಗಾರಕಾದಶಾ ಮೃತ್ಯುಪ್ರದ, 4. ಉಳಿದರೆ ಬುಧದಶಾ ಜ್ಞಾನಪ್ರದ, 5. ಉಳಿದರೆ ಗುರುದಶಾ ಲಾಭ, 6. ಉಳಿದರೆ ಶುಕ್ರದಶಾ ಸೌಖ್ಯಪ್ರದ 7. ಉಳಿದರೆ ಶನಿದಶಾ ಭಯಪ್ರದ, 8. ಉಳಿದರೆ ರಾಹುದಶಾ ಕಲಹಪ್ರದ, 9 ಉಳಿದರೆ ಕೇತುದಶಾ ಮೃತ್ಯುಭಯವೆಂತಲೂ ಈ ಪ್ರಕಾರವಾಗಿ ನಿತ್ಯಗ್ರಹದೆಶೆಗಳನ್ನು ನೋಡಿ ಫಲವನ್ನು ತಿಳಿಯುವುದು.

## ಕಾಲಹೋರಾ ವಿವರ

➤ **ಅರ್ಕಶ್ಶುಕ್ರೋ ಬುಧಶ್ಚಂದ್ರೋ ಮಂದೋ ಜೀವೋಧರಾಸುತಃ |**
**ವಾರೇಶಾತ್ಪಂಚಮಾದೂರ್ಧ್ವಂ ಕ್ರಮಾತ್ ಷಷ್ಠಂ ಪುನಃ ಪುನಃ ||69||**
**ದಿವಸಸ್ಯ ಚತುರ್ವಿಂಶತ್ ಕಾಲಹೋರಾಃ ಪ್ರಕೀರ್ತಿತಾಃ |**
**ಹೋರಾಣಾಂ ಚ ಪ್ರಮಾಣಂ ಸ್ಯಾತ್ಸಾರ್ಧದ್ವಿಘಟಿಕಾಸ್ಮೃತಾಃ ||70||**

ತಾ|| ಒಂದು ದಿವಸವೆಂದರೆ ಅಹೋರಾತ್ರಿಗಳು ಸೇರಿದ ದಿವಸಕ್ಕೆ 24 ಕಾಲಹೋರೆಗಳಾಗುತ್ತವೆ. ಹೋರೆ ಒಂದಕ್ಕೆ $2\ ^1/_2$ ಘಳಿಗೆ ಅಥವಾ 1 ಘಂಟೆ ಪ್ರಕಾರವಾಗಿ ಎಣಿಸುವುದು. ಎಣಿಸುವಾಗ್ಯೆ ಮೊದಲು ಭಾನುವಾರಾದಿಯಾಗಿ ಸೂರ್ಯ, ಶುಕ್ರ, ಬುಧ, ಚಂದ್ರ, ಶನಿ, ಗುರು, ಅಂಗಾರಕ ಈ ಪ್ರಕಾರವಾಗಿ ಲೆಕ್ಕ ಮಾಡಿಕೊಂಡು ಹೋಗಲು 24 ಆಗುತ್ತಲೂ ಸೋಮವಾರದ ಆದಿಯಲ್ಲಿ ಚಂದ್ರಹೋರೆ ಬರುವುದು. ಈ ಪ್ರಕಾರ ಆಯಾಯ ವಾರಗಳ ಸೂರ್ಯ ಉದಯ ಕಾಲಕ್ಕೆ ಆಯಾಯ ವಾರಗಳ ಕಾಲಹೋರೆಗಳೇ ಬಂದು ಪ್ರಾರಂಭವಾಗುವುದು.

## ಕಾಲಹೋರಾ ಫಲ

➤ ಅರ್ಕಹೋರಾ ಸಂಪ್ರಾಪ್ತಾ ವಿಪ್ರಮೇಕಂ ಪ್ರದರ್ಶನಂ ।
ಪೂರ್ಣೋದಕಂ ಕುಂಭಮೇಕಂ ವಿಧವಾದರ್ಶನಂ ಭವೇತ್ ॥ 71 ॥

ತಾ॥ ಸೂರ್ಯಹೋರೆಯಲ್ಲಿ ಒಂಟಿ ಬ್ರಾಹ್ಮಣ ದರ್ಶನ, ಒಂದು ಜಲಕುಂಭ, ವಿಧವಾ ಸ್ತ್ರೀ ದರ್ಶನ ಆಗುವುದು.

➤ ಶುಕ್ರಹೋರಾ ಸಂಪ್ರಾಪ್ತಾ ವಿಪ್ರಸ್ತ್ರೀಯುಗದರ್ಶನಂ ।
ಸುವಾಸಿನೀ ಫಲಯುತಾ ಶುಭವಾಕ್ಯಾನುವರ್ಣನಂ ॥72॥

ತಾ॥ ಶುಕ್ರಹೋರೆಯಲ್ಲಿ ಇಬ್ಬರು ಬ್ರಾಹ್ಮಣರು, ಫಲಸಹಿತವಾದ ಸುವಾಸಿನಿಯರು, ಶುಭವಾರ್ತಾ ಶ್ರವಣವು ಆಗುವುದು.

➤ ಬುಧಹೋರಾ ಸಂಪ್ರಾಪ್ತಾ ಗೋಕನ್ಯಾ ಭಾಂಡಕಂ
ದೀಪ್ಯಮಾನಂ ಪಾವಕಂ ಚ ಫಲಪುಷ್ಪಂ ತಥೈವಚ ॥73॥

ತಾ॥ ಬುಧಹೋರೆಯಲ್ಲಿ ಗೋವು, ಕನ್ಯಾ, ಮೊಸರುಮಡಿಕೆ, ಉರಿಯುವ ಬೆಂಕಿ, ಫಲಪುಷ್ಪ ಇವುಗಳ ದರ್ಶನವಾಗುವುದು.

➤ ಚಂದ್ರಹೋರಾ ಸಂಪ್ರಾಪ್ತಾ ಗರುಡೋ ಗೌಳಿವಾಮತಾ ।
ಕ್ಷೀರಕುಂಭಂ ತಥಾಮದ್ಯಂ ಛತ್ರಚಾಮರದರ್ಶನಂ ॥74॥

ತಾ॥ ಚಂದ್ರಹೋರೆಯಲ್ಲಿ ಗರುಡದರ್ಶನ, ವಾಮದಲ್ಲಿ ಹಲ್ಲಿ ನುಡಿಯುವುದು, ಹಾಲಿನ ಪಾತ್ರೆ, ಮದ್ಯ, ಛತ್ರ-ಚಾಮರ ಇವುಗಳ ದರ್ಶನವಾಗುವುದು.

➤ ಛಿನ್ನನಾಸಂ ಫಣೀಕಾಷ್ಟಂ ವಿಧವಾದರ್ಶನಂ ಭವೇತ್ ।
ವಾನರಂ ಕಲಹಂಚಾಗ್ನಿಂ ಶನಿಹೋರಾಫಲಂ ಭವೇತ್ ॥75॥

ತಾ॥ ಶನಿಹೋರೆಯಲ್ಲಿ ಮೂಗಿಲ್ಲದವನನ್ನೂ, ಹಾವನ್ನೂ, ಕಟ್ಟಿಗೆ ಹೊರೆ, ವಿಧವಾಸ್ತ್ರೀ, ಹೊಗೆಸಹಿತ ಬೆಂಕಿ, ಕಪಿ ಇವುಗಳ ದರ್ಶನವಾಗುವುದು.

➤ ದರ್ಪಣಂ ಗೀತವಾದ್ಯಂ ಚ ವಿಪ್ರಸ್ತೋಮಂ ಸುವಾಸಿನೀಂ ।
ಮಾಂಗಲ್ಯದರ್ಶನಂ ಚೈವ ಗುರುಹೋರಾಫಲಂ ಭವೇತ್ ॥76॥

ತಾ॥ ಗುರುಹೋರೆಯಲ್ಲಿ ಕನ್ನಡಿ, ಗೀತವಾದ್ಯಗಳು, ಬ್ರಾಹ್ಮಣ ಸಮೂಹ, ಸುವಾಸಿನಿಯರು ಇತ್ಯಾದಿ ದರ್ಶನವಾಗುವುದು.

➤ ರಿಕ್ತಭಾಂಡಂ ಚ ತಕ್ರಂ ಚ ಪಂಗುಂ ಶ್ವೇತಂ ಚ ಕುಕ್ಕುಟಂ ।
ಕಾಮಾದ್ದರ್ಶನಮಾಪ್ನೋತಿ ಕುಜಹೋರಾಫಲಂ ಭವೇತ್ ॥77॥

**ತಾ॥** ಕುಜಹೋರೆಯಲ್ಲಿ ಬರಿಯ ಮಡಿಕೆ, ಮಜ್ಜಿಗೆ, ಕುಂಟ, ಕುಷ್ಠ ಇತ್ಯಾದಿ ಅನಿಷ್ಠ ದರ್ಶನವಾಗುವುದು.

## ಉಚ್ಚ ನೀಚತ್ವ ವಿವರ

➤ ರವೇರ್ಮೇಷತುಲೇಪ್ರೋಕ್ತಾಃ ಚಂದ್ರಸ್ಯ ವೃಷವೃಶ್ಚಿಕೌ ।
ಭೌಮಸ್ಯ ಮೃಗಕರ್ಕೇಚ ಕನ್ಯಾಮೀನೌ ಬುಧಸ್ಯ ಚ ॥78॥
ಗುರೋಃ ಕರ್ಕಟಕಮೃಗೌ ಮೀನಕನ್ಯೇ ಭೃಗೋಸ್ತಥಾ ।
ತುಲಾಮೇಷೇ ಶನೇಶ್ಚೈವ ಗ್ರಹಾಣಾಂ ಉಚ್ಚ ನೀಚಕಾಃ ॥79॥

ತಾ ॥ ಸೂರ್ಯನಿಗೆ ಮೇಷ ಉಚ್ಚವೆಂತಲೂ, ತುಲಾ ನೀಚವೆಂತಲೂ, ಚಂದ್ರನಿಗೆ ವೃಷಭ ಉಚ್ಚವೆಂತಲೂ, ವೃಶ್ಚಿಕ ನೀಚವೆಂತಲೂ, ಕುಜನಿಗೆ ಮಕರ ಉಚ್ಚವೆಂತಲೂ, ಕರ್ಕಾಟಕ ನೀಚವೆಂತಲೂ, ಬುಧನಿಗೆ ಕನ್ಯಾ ಉಚ್ಚವೆಂತಲೂ, ಮೀನ ನೀಚವೆಂತಲೂ, ಗುರುವಿಗೆ ಕರ್ಕಾಟಕ ಉಚ್ಚವೆಂತಲೂ, ಮಕರ ನೀಚವೆಂತಲೂ, ಶುಕ್ರನಿಗೆ ಮೀನ ಉಚ್ಚವೆಂತಲೂ, ಕನ್ಯಾ ನೀಚವೆಂತಲೂ, ಸೂರ್ಯಾದಿ ಗ್ರಹಗಳಿಗೆ ಈ ಪ್ರಕಾರ ಉಚ್ಚ-ನೀಚ ರಾಶಿಗಳನ್ನು ತಿಳಿಯುವುದು.

## ಗ್ರಹಗಳ ಉತ್ತಮ ಫಲ ಕೊಡತಕ್ಕ ರಾಶಿಗಳು

➤ ಷಟ್‌ತ್ರಿದಶಸ್ಥೋ ಭಾನುಃ ದಶ ಜನ್ಮತ್ರಿಸಪ್ತಮೇಷು ಶಶೀ ।
ಕುಜ ರಾಹು ಕೇತು ಮಂದಾಃ ಷಟ್ ತ್ರಿಸ್ಥಸ್ಸೌಖ್ಯಪ್ರದಾ ನೃಣಾಂ ॥80॥
ಚತುರಷ್ಟದ್ವಿದಶಸ್ಥಾನಗತಜ್ಞಃ ಫಲಪ್ರದಸ್ಸತತಂ
ಗುರುರದ್ರಿದ್ವಿನವಮ ಪಂಚಮೇ ಶುಭಪ್ರದೋ ನಿತರಾಂ ॥81॥
ಕವಿನಗಷಡ್ದಶವರ್ಜಶ್ಚೈಕಾದಶಗಾಶ್ಶುಭಗ್ರಹಾಸ್ಸರ್ವೇ ॥82॥

**ತಾ॥** ಸೂರ್ಯನು ಜನ್ಮರಾಶಿಯಿಂದ 3, 6, 10 ರಲ್ಲಿ ಶುಭಫಲವನ್ನು ಕೊಡುವನು. ಚಂದ್ರನು 1, 3, 7, 10ರಲ್ಲಿ – ಅಂಗಾರಕ, ಶನಿ, ರಾಹು, ಕೇತುಗಳು 3, 6ರಲ್ಲಿ – ಬುಧನು 2, 4, 6, 8, 10 ರಲ್ಲಿ – ಗುರುವು 2, 5, 7, 9 ರಲ್ಲಿ – ಶುಕ್ರನು 1, 2, 3, 4, 5, 8, 9, 11, 12ರಲ್ಲಿ ಶುಭಫಲವನ್ನು ಕೊಡುವರು. ಎಲ್ಲಾ ಗ್ರಹಗಳು 11ನೇ ಮನೆಯಲ್ಲಿ ಶುಭಫಲಗಳನ್ನು ಕೊಡತಕ್ಕವರೆಂದು ತಿಳಿಯುವುದು.

## ಗ್ರಹಗಳ ಫಲಕಾಲಗಳು

➤ ಶನಿ ಶುಕ್ರ ಬುಧಾಃ ಮಾಸಂ ಮಾಸಂ ಮಾಸಾರ್ಧಕಃ ಕುಜಃ ॥83॥
ಗುರೋರ್ದ್ವಾದಶಮಾಸಂಚ ತ್ರಿಂಶನ್ಮಾಸಂ ಶನೈಶ್ಚರಃ ॥
ರಾಹೋರಷ್ಟಾದಶಶ್ಚೈವ ಕೇತುಶ್ಚೈವ ತಥಾಕ್ರಮಂ ॥84॥

ತಾ ॥ ಸೂರ್ಯ, ಶುಕ್ರ, ಬುಧ ಗ್ರಹಗಳು 1 ಮಾಸವು, ಅಂಗಾರಕನು 1 $^1/_2$ ಮಾಸವು, ಗುರುವು 12 ಮಾಸಗಳು, ಶನಿಯು 30 ಮಾಸಗಳು, ರಾಹು-ಕೇತುಗಳು 18 ಮಾಸಗಳು ಒಂದೊಂದು ರಾಶಿಯಲ್ಲಿರುವರೆಂದು ಆಯಾಯ ಕಾಲದಲ್ಲಿ ಆಯಾಯ ರಾಶಿಯವರಿಗೆ ಉಕ್ತವಾಗಿರುವ ಪ್ರಕಾರ ಶುಭಫಲವನ್ನಾಗಲಿ, ಪಾಪಫಲವನ್ನಾಗಲಿ ಅಷ್ಟಷ್ಟು ದಿನ ಕೊಡುವರೆಂದು ತಿಳಿಯುವುದು.

## ರವಿ ಗೋಚಾರ ಫಲ

➤ ಸ್ಥಾನಂ ನಾಶಂ ಭಯಂ ಲಕ್ಷ್ಮೀಂ ಮಾನಹಾನಿಂ ಮನೋರುಜಂ ॥85॥
ಪೀಡಾದ್ವೇಷಃ ಕ್ರಿಯಾಫಲಂ ವಿತ್ತಲಾಭಂ ಧನಚ್ಛೇದಂ ಕ್ರಮೇಣ ಕುರುತೇ ರವಿಃ ॥86॥

ತಾ ॥ ಸೂರ್ಯನು 1 ರಲ್ಲಿ ಸ್ಥಾನನಾಶ, 2ರಲ್ಲಿ ಭಯ, 3ರಲ್ಲಿ ಧನಪ್ರಾಪ್ತಿ, 4ರಲ್ಲಿ ಮಾನಹಾನಿ, 5ರಲ್ಲಿ ದುಃಖ, 6ರಲ್ಲಿ ಶತ್ರುನಾಶ, 7ರಲ್ಲಿ ಪ್ರಯಾಣ, 8ರಲ್ಲಿ ಪೀಡಾ, 9ರಲ್ಲಿ ದ್ವೇಷ, 10ರಲ್ಲಿ ಲಾಭ, 11ರಲ್ಲಿ ಲಾಭ, 12ರಲ್ಲಿ ನಷ್ಟ – ಈ ಪ್ರಕಾರವಾಗಿ ಜನ್ಮಾದಿ ರಾಶಿಗಳಲ್ಲಿ ಸೂರ್ಯನ ಫಲವನ್ನು ತಿಳಿಯುವುದು.

## ಚಂದ್ರ ಗೋಚಾರ ಫಲ

➤ ಮೃಷ್ಟಾನ್ನಂ ವಿತ್ತನಾಶಂ ಚ ।ದ್ರವ್ಯಪ್ರಾಪ್ತಿಂ ಕುಕ್ಷಿರೋಗತಾಂ ॥
ಕಾರ್ಯಹಾನಿಂ ಧನಪ್ರಾಪ್ತಿಂ । ಯೋಷಿಲ್ಲಾಭಂ ಮೃತಿರ್ಭಯಂ ।
ಸೌಖ್ಯಂ ಧನಂ ದ್ರವ್ಯನಾಶಂ ಕ್ರಮೇಣ ಕುರುತೇ ಶಶೀ ॥88॥

ತಾ ॥ ಚಂದ್ರನು 1 ರಲ್ಲಿ ಮೃಷ್ಟಾನ್ನ 2 ರಲ್ಲಿ ನಷ್ಟ 3 ರಲ್ಲಿ ಲಾಭ, 4 ರಲ್ಲಿ ಉದರಶೂಲೆ, 5 ರಲ್ಲಿ ಕಾರ್ಯನಷ್ಟ, 6ರಲ್ಲಿ ಧನಲಾಭ, 7ರಲ್ಲಿ ಸ್ತ್ರೀಭೋಗ, 8ರಲ್ಲಿ ಭಯ, 9ರಲ್ಲಿ ಭಯ, 10ರಲ್ಲಿ ಸೌಖ್ಯ, 11ರಲ್ಲಿ ಧನ, 12ರಲ್ಲಿ ದ್ರವ್ಯನಷ್ಟ, ಈ ಪ್ರಕಾರವಾಗಿ ಜನ್ಮದ ರಾಶಿಗಳಲ್ಲಿ ಚಂದ್ರನ ಫಲವನ್ನು ತಿಳಿಯುವುದು.

## ಅಂಗಾರಕ ಗೋಚಾರ ಫಲ

➢ ನಿಧನಂ ಖೇದ ಸೌಖ್ಯಂ ಚ ನೃಪಪೀಡಾ ರಿಪೋರ್ಭಯಂ ॥
ಅರ್ಥಸಿದ್ಧಿರ್ಮನಸ್ತಾಪಂ ಶತ್ರುಬಾಧಾ ಧನಕ್ಷಯಂ ॥
ಮನಶ್ಶೋಕಂ ಮನಃ ಕ್ರೌರ್ಯಂ ಸಂತಾಪಂ ಕುರುತೇ ಕುಜಃ ॥89॥

ತಾ॥ ಅಂಗಾರಕನು 1 ರಲ್ಲಿನಿಧನ, 2ರಲ್ಲಿ ಖೇದ, 3ರಲ್ಲಿಸೌಖ್ಯ, 4ರಲ್ಲಿ ರಾಜಪೀಡೆ, 5ರಲ್ಲಿ ಶತ್ರುಭಯ, 6ರಲ್ಲಿ ಧನಲಾಭ, 7ರಲ್ಲಿ ಮನಸ್ತಾಪ, 8ರಲ್ಲಿ ಶತ್ರುಬಾಧೆ, 9ರಲ್ಲಿ ಧನಕ್ಷಯ, 10ರಲ್ಲಿಮನಶ್ಶೋಕ, 11ರಲ್ಲಿಕ್ರೌರ್ಯ, 12ರಲ್ಲಿಸಂತಾಪ. ಈ ಪ್ರಕಾರವಾಗಿ ಜನ್ಮಾದಿ ರಾಶಿಗಳಲ್ಲಿ ಅಂಗಾರಕನ ಫಲವನ್ನು ತಿಳಿಯುವುದು.

## ಬುಧ ಗೋಚಾರ ಫಲ

➢ ಅರ್ಥಕ್ಷಯಂ ಶ್ರಿಯಮರಾತಿಭಯಂ ಧನಪ್ರಾಪ್ತಿಂ।
ಭಾರ್ಯಾಸದೈವ ಕಲಹಂ ವಿಜಯಂ ವಿರೋಧಂ ॥
ಪುತ್ರಾರ್ಥಲಾಭ ಮಥವಿಘ್ನಮಶೇಷ ಸೌಖ್ಯಂ।
ಷಷ್ಟಿಃ ಪರಾಭವಭಯಂ ಚ ಕರೋತಿ ಸೌಮ್ಯಃ ॥90॥

ತಾ॥ ಬುಧನು ಜನ್ಮಾದಿ 1ರಲ್ಲಿ ಇದ್ದರೆ ನಷ್ಟವು, 2ರಲ್ಲಿ ಸಂಪತ್ತು, 3ರಲ್ಲಿ ಶತ್ರುಭಯ, 4ರಲ್ಲಿ ಧನಲಾಭ, 5ರಲ್ಲಿ ಭಾರ್ಯಾಕಲಹ, 6ರಲ್ಲಿ ವಿಜಯ, 7ರಲ್ಲಿ ವಿರೋಧ, 8ರಲ್ಲಿ ಪುತ್ರಲಾಭ, 9ರಲ್ಲಿ ವಿಘ್ನ, 10ರಲ್ಲಿ ಸೌಖ್ಯ, 11ರಲ್ಲಿ ಪುಷ್ಟಿ, 12ರಲ್ಲಿ ಪರಾಭವ ಹಾಗೂ ಭಯ. ಈ ಪ್ರಕಾರ ಜನ್ಮಾದಿ ದ್ವಾದಶ ರಾಶಿಗಳಲ್ಲಿ ಬುಧನ ಗೋಚಾರ ಫಲವನ್ನು ತಿಳಿಯುವುದು.

## ಗುರುಗೋಚಾರ ಫಲ

➢ ನಾನಾದುಃಖಂ ವಿತ್ತಸುತಾಪ್ತಿಂ ಸ್ಥಿತಿನಾಶನಂ ಬಂಧುಕ್ಲೇಶಂ ಪುತ್ರಧನಪ್ರಾಪ್ತಿಂ ರಿಪುಪೀಡಾಂ। ಭೋಗಾನ್ ರೋಗಾನ್ಮಿತ್ರ ಸಮೃದ್ಧಿಂ ಧನಹಾನಿಂ ಮಾನಪ್ರಾಪ್ತಿಂ ದುಃಖಂ ಯಚ್ಛತಿ ಜೀವಃ ಕ್ರಮಶಃ ॥91॥

ತಾ॥ ಗುರುವು ಜನ್ಮಾದಿ 1ರಲ್ಲಿ ಇದ್ದರೆ ದುಃಖ, 2ರಲ್ಲಿ ದ್ರವ್ಯಲಾಭ, 3ರಲ್ಲಿ ಸ್ಥಿತಿನಾಶ, 4ರಲ್ಲಿ ಬಂಧುಕ್ಲೇಶ, 5ರಲ್ಲಿ ಪುತ್ರ ಮತ್ತು ಧನಪ್ರಾಪ್ತಿ, 6ರಲ್ಲಿ ಶತ್ರುಬಾಧೆ, 7ರಲ್ಲಿ ಭೋಗ, 8ರಲ್ಲಿ ರೋಗ, 9ರಲ್ಲಿ ಮಿತ್ರಸಮೃದ್ಧಿ, 10ರಲ್ಲಿ ದ್ರವ್ಯನಷ್ಟ, 11ರಲ್ಲಿ ಮಾನಪ್ರಾಪ್ತಿ, 12ರಲ್ಲಿ ದುಃಖವು. ಈ ಪ್ರಕಾರ ಗುರು ಗೋಚಾರ ಫಲವನ್ನು ತಿಳಿಯುವುದು.

## ಶುಕ್ರ ಗೋಚಾರ ಫಲ

➢ ಅಖಿಲ ವಿಷಭೋಗಂ ವಿತ್ತ ಲಾಭಂ ವಿಪತ್ತಿಂ ಸುಖಿಸುಹೃದಭಿವೃದ್ಧಿಂ ಪುತ್ರ ಪೌತ್ರಾದಿಲಾಭಃ । ಯುವತಿ ಜನಿತ ಬಾಧಾಂ ಸಂಪದಂ ಸ್ತ್ರೀಸುಖಪ್ರಾಪ್ತಿಂ । ಕಲಹಮುದಯಮಾಧಿಂ ದೈತ್ಯಮಂತ್ರಿರ್ವಿಧತೇ ॥92॥

ತಾ॥ ಶುಕ್ರನು ಜನ್ಮಾದಿ 1ರಲ್ಲಿದ್ದರೆ ಎಲ್ಲಾ ವಿಷಯಸುಖ, 2ರಲ್ಲಿ ಧನಲಾಭ, 3ರಲ್ಲಿ ತೊಂದರೆ, 4ರಲ್ಲಿ ಸುಖಮಿತ್ರ ಸಮಾಗಮ, 5ರಲ್ಲಿ ಪುತ್ರಸುಖ, 6ರಲ್ಲಿ ಸ್ತ್ರೀ ಮೂಲಕ ವಿಪತ್ತು, 7ರಲ್ಲಿ ಸಂಪತ್ತು, 8ರಲ್ಲಿ ಸ್ತ್ರೀ ಸುಖ, 9ರಲ್ಲಿ ಸುವಸ್ತು ಲಾಭ, 10ರಲ್ಲಿ ಕಲಹ, 11ರಲ್ಲಿ ಲಾಭ, 12ರಲ್ಲಿ ವ್ಯಥೆ. ಈ ಪ್ರಕಾರವಾಗಿ ಜನ್ಮಾದಿ ದ್ವಾದಶ ರಾಶಿಗಳಲ್ಲಿ ಶುಕ್ರಗೋಚಾರಫಲವನ್ನು ತಿಳಿಯುವುದು.

## ಶನಿ ಗೋಚಾರ ಫಲ

➢ ನಾನಾರೋಗಶುಚಸ್ಸುಖಾರ್ಥವಿಹತಿಂ ಸ್ಥಾನಾರ್ಥಭೃತ್ಯಾಧಿಕಂ ।
ಸ್ತ್ರೀಬಂಧ್ವರ್ಥಸುಖಚ್ಯುತಿಂ ಧನಸುಖಭ್ರಂಶಂ ಸಪತ್ನಕ್ಷಯಂ ॥
ಮಾರ್ಗಶಕ್ತಿಮನರ್ಥದುಃಖವಿಷಮಂ ಧರ್ಮಪ್ರಣಾಶಂ ನೃಣಾಂ ॥
ದಾರಿದ್ರ್ಯಂ ಧನಲಾಭಮರ್ಥವಿಹೃತಿಂ ದತ್ತೇಕ್ರಮಾದರ್ಕಜಃ ॥93॥

ತಾ॥ ಶನಿಯು ಜನ್ಮಾದಿ 1ರಲ್ಲಿದ್ದರೆ ರೋಗಬಾಧೆ, 2ರಲ್ಲಿ ದುಃಖ, 3ರಲ್ಲಿ ರಾಜಪ್ರೀತಿ, 4ರಲ್ಲಿ ಬಂಧು ದ್ರವ್ಯನಾಶ, 5ರಲ್ಲಿ ಪುತ್ರನಷ್ಟ, 6ರಲ್ಲಿ ಶತ್ರುಜಯ, 7ರಲ್ಲಿ ಪ್ರಯಾಣ, 8ರಲ್ಲಿ ವಿಪತ್ತು, 9ರಲ್ಲಿ ಧರ್ಮಲೋಪ, 10ರಲ್ಲಿ ದಾರಿದ್ರ್ಯ, 11ರಲ್ಲಿ ಲಾಭ, 12ರಲ್ಲಿ ನಷ್ಟ. ಈ ಪ್ರಕಾರವಾಗಿ ಶನಿ ಗೋಚಾರಫಲವನ್ನು ತಿಳಿಯುವುದು.

## ರಾಹು-ಕೇತು ಗೋಚಾರ ಫಲ

➢ ರಾಹುರ್ಜನ್ಮಗತೋ ಭಯಂ ಕಲಹಂ ಸೌಭಾಗ್ಯಮಾನಕ್ಷಯಂ ।
ವಿತ್ತಭ್ರಂಶಮಹತ್ಸುಖಂ ನಿಧನತಾಮರ್ಥಕ್ಷಯಂ ಜಾಯತೇ ॥
ಸಂತಾಪಂ ಕಲಹಂ ಚ ಸೌಖ್ಯಮಧಿಕಂ ಶೀಘ್ರಂ ವಿನಾಶಂ ನೃಣಾಂ ।
ಕೇತೋಸ್ತತ್ಫಲಮಾಮನಂತಿ ಮುನಯಃ ಶಂಸಂತಿಗರ್ಗಾದಯಃ ॥94॥

ತಾ॥ ರಾಹುಕೇತುಗಳು ಜನ್ಮಾದಿ 1ರಲ್ಲಿದ್ದರೆ ಭಯ, 2ರಲ್ಲಿ ಕಲಹ, 3ರಲ್ಲಿ ಸೌಭಾಗ್ಯ, 4ರಲ್ಲಿ ಮಾನಹಾನಿ, 5ರಲ್ಲಿ ಧನನಾಶ, 6ರಲ್ಲಿ ಸೌಖ್ಯ, 7ರಲ್ಲಿ ಮೃತ್ಯು, 8ರಲ್ಲಿ ಧನಹಾನಿ,

9ರಲ್ಲಿ ಜಗಳ, 10ರಲ್ಲಿ ಸೌಖ್ಯ, 11ರಲ್ಲಿ ವೃದ್ಧಿ, 12ರಲ್ಲಿ ನಷ್ಟ ಹಾಗೂ ವ್ಯಾಧಿ. ಈ ಪ್ರಕಾರವಾಗಿ ರಾಹು-ಕೇತುಗಳ ಗೋಚಾರಫಲವನ್ನು ಜನ್ಮರಾಶಿಗಳಲ್ಲಿ ತಿಳಿಯುವುದು ಎಂದು ಗರ್ಗ ಮೊದಲಾದ ಮುನಿಗಳ ವಚನ.

## ಗ್ರಹದೃಷ್ಟಿ ವಿಷಯ

➤ **ಪಶ್ಯಂತಿ ಸಪ್ತಮಂ ಸರ್ವೇ ಶನಿ ಜೀವ ಕುಜಾಃ ಪುನಃ ||**
**ವಿಶೇಷತಶ್ಚ ತ್ರಿದಶ ತ್ರಿಕೋಣ ಚತುರಶ್ರವಾನ್ ||95||**

**ತಾ ||** ಸೂರ್ಯಾದಿ ಸಮಸ್ತ ಗ್ರಹಗಳು ತಾವು ಇರುವ ರಾಶಿಯಿಂದ 7ನೇ ಮನೆಯನ್ನು ನೋಡುವರು. ಶನಿ, ಕುಜ, ಗುರುಗಳು 7ನೇ ಮನೆಯನ್ನು ನೋಡುವುದಲ್ಲದೇ ಶನಿಯು 3, 10ನೇ ಮನೆಗಳನ್ನೂ, ಅಂಗಾರಕನು 4, 8ನೇ ಮನೆಗಳನ್ನೂ, ಗುರುವು 5, 9ನೇ ಮನೆಗಳನ್ನೂ ವಿಶೇಷ ದೃಷ್ಟಿಯಿಂದ ನೋಡುವರೆಂದು ತಿಳಿಯುವುದು.

## ತಿಥ್ಯಧಿದೇವತೆಗಳ ವಿಷಯ

➤ **ವಹ್ನಿಸ್ತ್ವಷ್ಟಾತ್ರತಥಾ ಧಾತಾ ಗೌರೀ ಗಣಪತಿಸ್ತಥಾ ||**
**ಸರ್ಪಃ ಕುಮಾರಃ ಸೂರ್ಯಶ್ಚ ಮಹೇಶ ವಸವೋ ಗಜಃ ||**
**ಧರ್ಮೋ ವಿಷ್ಣುಃ ಕಾಮಕಲೀ ಚಂದ್ರಮಾನ್ ಪಿತರಸ್ತಥಾ ||**
**ಏತೇ ಷೋಡಶ ಸಂಖ್ಯಾತಾಃ ತಿಥೀನಾಮಧಿದೇವತಾಃ ||96||**

**ತಾ ||** ಪಾಡ್ಯಕ್ಕೆ ಯಜ್ಞೇಶ್ವರನು, ಬಿದಿಗೆಗೆ ತ್ವಷ್ಟ್ರ, ತದಿಗೆಗೆ ಪಾರ್ವತಿ, ಚತುರ್ಥಿಗೆ ಗಣಪತಿ, ಪಂಚಮಿಗೆ ಸರ್ಪ, ಷಷ್ಠಿಗೆ ಕುಮಾರಸ್ವಾಮಿ, ಸಪ್ತಮಿಗೆ ಸೂರ್ಯ, ಅಷ್ಟಮಿಗೆ ಈಶ್ವರ, ನವಮಿಗೆ ಅಷ್ಟವಸುಗಳು, ದಶಮಿಗೆ ಗಜ, ಏಕಾದಶಿಗೆ ಧರ್ಮ, ದ್ವಾದಶಿಗೆ ವಿಷ್ಣು, ತ್ರಯೋದಶಿಗೆ ಮನ್ಮಥ, ಚತುರ್ದಶಿಗೆ ಕಲಿಪುರುಷ, ಪೌರ್ಣಮಿಗೆ ಚಂದ್ರ, ಅಮಾವಾಸ್ಯೆಗೆ ಪಿತೃ ದೇವತೆಗಳು ಎಂಬುದಾಗಿ ಆಯಾಯ ತಿಥಿಗಳ ಅಭಿಮಾನ ದೇವತೆಗಳನ್ನು ತಿಳಿಯುವುದು.

## ನಕ್ಷತ್ರಗಳ ಅಧಿದೇವತೆಗಳ ವಿಷಯ

➤ **ದಸ್ರೌ ಯಮಶ್ಚ ವಹ್ನಿಶ್ಚ ಬ್ರಹ್ಮೇಂದೂ ರುದ್ರ ಸಂಜ್ಞಕಃ ||**
**ಅದಿತೀಜ್ಯಾಹೀಚ ಪಿತರೋ ಮಾರ್ತಾಂಡಶ್ಚಾರ್ಯಮಾ ತಥಾ ||98||**

ಸವಿತಾಚ ತಥಾ ತ್ವಷ್ಟಾವಾಯುಶ್ಚೇಂದ್ರಾಗ್ನಿ ದೇವತಾಃ ॥
ಮಿತ್ರೇಂದ್ರೌ ರಾಕ್ಷಸಜಲೇ ವಿಶ್ವದೇವಾಹರಿಸ್ತಥಾ ॥99॥
ವಸವೊ ವರುಣಶ್ಚೈವ ಜಲಂಬ್ರಹ್ಮ ತಥೈವಚ
ಪೂಷಾಚೇತಿ ಸಮಾಖ್ಯಾತಾ ನಕ್ಷತ್ರಾಣಾಮಧೀಶ್ವರಾಃ ॥ 100॥

ತಾ॥ ಅಶ್ವಿನಿಗೆ ಅಶ್ವಿನಿ ದೇವತೆಗಳೂ, ಭರಣಿಗೆ ಯಮ, ಕೃತ್ತಿಕೆಗೆ ಅಗ್ನಿ, ರೋಹಿಣಿಗೆ ಬ್ರಹ್ಮ, ಮೃಗಶಿರಕ್ಕೆ ಚಂದ್ರ, ಆರ್ದ್ರೆಗೆ ರುದ್ರ, ಪುನರ್ವಸುವಿಗೆ ಅದಿತಿ, ಪುಷ್ಯಕ್ಕೆ ಬೃಹಸ್ಪತಿ, ಆಶ್ಲೇಷಕ್ಕೆ ಸರ್ಪ, ಮಘಾಕ್ಕೆ ಪಿತೃದೇವತೆಗಳು, ಪುಬ್ಬಾಕ್ಕೆ ಸೂರ್ಯ, ಉತ್ತರೆಗೆ ಆರ್ಯಮ, ಹಸ್ತಾಕ್ಕೆ ಸವಿತೃ, ಚಿತ್ತಕ್ಕೆ ತ್ವಷ್ಟ್ರು, ಸ್ವಾತಿಗೆ ವಾಯು, ವಿಶಾಖೆಗೆ ಇಂದ್ರಾಗ್ನಿ, ಅನೂರಾಧಾಗೆ ಮಿತ್ರ, ಜ್ಯೇಷ್ಠಗೆ ಇಂದ್ರ, ಮೂಲಕ್ಕೆ ರಾಕ್ಷಸ, ಪೂರ್ವಾಷಾಢಕ್ಕೆ ಉದಕ, ಉತ್ತರಾಷಾಢಕ್ಕೆ ವಿಶ್ವದೇವತೆಗಳು, ಶ್ರವಣಕ್ಕೆ ವಿಷ್ಣು, ಧನಿಷ್ಠಕ್ಕೆ ಅಷ್ಟವಸುಗಳು, ಶತಭಿಷೆಗೆ ವರುಣ, ಪೂರ್ವಾಭಾದ್ರೆಗೆ ಜಲವು, ಉತ್ತರಾಭಾದ್ರೆಗೆ ಬ್ರಹ್ಮ, ರೇವತಿಗೆ ಪೂಷಾನಾಮ ದೇವತೆ – ಈ ರೀತಿ ಅಶ್ವಿನ್ಯಾದಿ ನಕ್ಷತ್ರಗಳ ಅಧಿಪತಿಗಳನ್ನು ತಿಳಿಯುವುದು.

## ನಕ್ಷತ್ರಗಳಿಗೆ ಕ್ಷಿಪ್ರಾದಿ ಸಂಜ್ಞಾ ವಿಷಯ

➤ ಕ್ಷಿಪ್ರಂ ದಸ್ರರವೀಜ್ಯಮಾಸುರಶಿವಂ ಜ್ಯೇಷ್ಠೋರಗೌ ದಾರುಣಂ ॥
ಚಿತ್ರಾಂತ್ಯೇಂದುಭಮೈತ್ರಭಂ ಮೃದಭವೇದ್ಬ್ರಾಹ್ಮ್ಯುತ್ತರಾಭಂ ಸ್ಥಿರಂ ॥
ಉಗ್ರಂ ಕಾಲಮಖಾತ್ರಿಪೂರ್ವಮನಲೇಂದ್ರಾಗ್ನೀತು ಸಾಧಾರಣಂ ।
ಸ್ವಾತ್ಯಾದಿತ್ಯ ಹರಿತ್ರಯಂ ಚರಮಿದಂ ದದ್ಯಾತ್ಸ್ವ ಸಂಜ್ಞಾಫಲಂ ॥ 101 ॥

ತಾ ॥ ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳಲ್ಲಿ ಅಶ್ವಿನಿ, ಹಸ್ತ, ಪುಷ್ಯ ಈ ಮೂರು ನಕ್ಷತ್ರಗಳು ಕ್ಷಿಪ್ರಸಂಜ್ಞೆಯುಳ್ಳವುಗಳು. ಮೂಲ, ಆರ್ದ್ರಾ, ಜ್ಯೇಷ್ಠ, ಆಶ್ಲೇಷ ಈ ನಕ್ಷತ್ರಗಳು ದಾರುಣಸಂಜ್ಞೆಯುಳ್ಳವುಗಳು. ಚಿತ್ತ, ರೇವತಿ, ಮೃಗಶಿರ, ಅನೂರಾಧ ಈ ನಾಲ್ಕು ನಕ್ಷತ್ರಗಳು ಮೃದುಸಂಜ್ಞೆಯುಳ್ಳವುಗಳು. ರೋಹಿಣಿ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ ಈ ನಾಲ್ಕು ನಕ್ಷತ್ರಗಳು ಸ್ಥಿರಸಂಜ್ಞೆಯುಳ್ಳವುಗಳು. ಭರಣಿ, ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ, ಮಘಾ ಈ ಐದು ನಕ್ಷತ್ರಗಳು ಉಗ್ರಸಂಜ್ಞೆ ಉಳ್ಳವುಗಳು. ಕೃತ್ತಿಕಾ, ವಿಶಾಖಾ ಈ ಎರಡು ನಕ್ಷತ್ರಗಳು ಸಾಧಾರಣ ಸಂಜ್ಞೆಯುಳ್ಳವುಗಳು. ಸ್ವಾತಿ, ಪುನರ್ವಸು, ಶ್ರವಣ, ಧನಿಷ್ಠ, ಶತಭಿಷ ಈ ಐದು ನಕ್ಷತ್ರಗಳು ಚರ ನಕ್ಷತ್ರಗಳು. ಆಯಾಯ ನಕ್ಷತ್ರಗಳು ಆಯಾಯ ಸಂಜ್ಞಾಪ್ರಕಾರ ಫಲವನ್ನು ಕೊಡತಕ್ಕವುಗಳು.

## ಪ್ರಯಾಣಕ್ಕೆ ತಿಥಿಗಳು

➤ ಪ್ರತಿಪದ್ಗಮನಂ ನಷ್ಟಂ ದ್ವಿತೀಯಾ ಕಾರ್ಯಸಿದ್ಧಿದಾ ॥
ತೃತೀಯಾ ಕ್ಷೇಮದಾ ಪ್ರೋಕ್ತಾ ಚತುರ್ಥೀ ರೋಗದಾಯಿನೀ ॥
ಪಂಚಮೀ ಸುಖದಾ ಚೈವ ಷಷ್ಠೀ ಕಲಹದಾಯಿನೀ ॥
ಸಪ್ತಮ್ಯಾಂ ಧನವೃದ್ಧಿಶ್ಚ ಅಷ್ಟಮ್ಯಾಂ ಮರಣಂ ಧ್ರುವಂ ॥
ನವಮ್ಯಾಂ ವ್ಯಾಧಿಸಂಪ್ರಾಪ್ತಿಃ ದಶಮ್ಯಾಂ ಧನಲಾಭಕಂ ॥
ಏಕಾದಶ್ಯಾಂ ಸೌಖ್ಯವೃದ್ಧಿಃ ದ್ವಾದಶ್ಯಾಂ ನಿಧನಂ ಧ್ರುವಂ ॥
ತ್ರಯೋದಶ್ಯಾಂ ಕಾರ್ಯಸಿದ್ಧಿಃ ಚತುರ್ದಶ್ಯಾಂತು ಭೀತಿದಂ ॥
ಪೂರ್ಣಿಮಾಯಾಂ ಶುಭಂ ಚೈವ ಅಮಾವಾಸ್ಯಾ ಚ ಮೃತ್ಯುದಾ ॥ 105 ॥

**ತಾ ॥** ಪಾಡ್ಯದಲ್ಲಿ ಪ್ರಯಾಣ ಮಾಡಿದರೆ ನಷ್ಟ, ಬಿದಿಗೆಯಲ್ಲಿ ಕಾರ್ಯಸಿದ್ಧಿ, ತದಿಗೆಯಲ್ಲಿಕ್ಷೇಮ, ಚೌತಿಯಲ್ಲಿರೋಗ, ಪಂಚಮಿಯಲ್ಲಿಸುಖ, ಷಷ್ಠಿಯಲ್ಲಿಕಲಹಪ್ರದ, ಸಪ್ತಮಿಯಲ್ಲಿ ಧನವೃದ್ಧಿ, ಅಷ್ಟಮಿಯಲ್ಲಿ ಮರಣ, ನವಮಿಯಲ್ಲಿ ವ್ಯಾಧಿಸಂಭವ, ದಶಮಿಯಲ್ಲಿ ಧನಲಾಭ, ಏಕಾದಶಿಯಲ್ಲಿ ಸೌಖ್ಯವೃದ್ಧಿ, ದ್ವಾದಶಿಯಲ್ಲಿ ನಿಧನಪ್ರದ, ತ್ರಯೋದಶಿಯಲ್ಲಿಸಕಲ ಇಷ್ಟಾರ್ಥಸಿದ್ಧಿ, ಚತುರ್ದಶಿಯಲ್ಲಿಭೀತಿ, ಪೂರ್ಣಿಮಾದಲ್ಲಿ ಶುಭ, ಅಮಾವಾಸ್ಯೆಯಲ್ಲಿ ಮೃತ್ಯುವು ಎಂಬುದಾಗಿ ಆಯಾಯ ತಿಥಿಗಳ ಫಲಗಳನ್ನು ತಿಳಿಯುವುದು.

## ತಿಥಿಗಳ ಶೂಲ ವಿಷಯ

➤ ಪ್ರತಿಪನ್ನವಮೀ ಪೂರ್ವೇ ದ್ವಿತೀಯಾಚ ದಶೋತ್ತರೇ ॥
ತೃತೀಯೈಕಾದಶೀ ವಹ್ನೌ ಚತುರ್ದ್ವಾದಶ ನೈರುತೌ ॥106॥
ಪಂಚತ್ರಯೋದಶೀಯಾಮ್ಯೇ ಷಷ್ಠಿಭೂತಾ ಚ ವಾರುಣೇ ॥
ಸಪ್ತಮೀ ಪೂರ್ಣಿಮಾ ವಾಯೌ । ಅಮಾವಾಸ್ಯಾಷ್ಟಮೀಶಕೇ ॥ 107 ॥

**ತಾ ॥** ಪಾಡ್ಯ-ನವಮಿ ಈ ತಿಥಿಗಳಲ್ಲಿ ಪೂರ್ವದಿಕ್ಕಿಗೆ, ಬಿದಿಗೆ-ದಶಮಿ ಈ ತಿಥಿಗಳಲ್ಲಿ ಉತ್ತರ ದಿಕ್ಕಿಗೆ, ತದಿಗೆ-ಏಕಾದಶಿ ಈ ತಿಥಿಗಳಲ್ಲಿ ಆಗ್ನೇಯ ದಿಕ್ಕಿಗೆ, ಚೌತಿ-ದ್ವಾದಶಿ ಈ ತಿಥಿಗಳಲ್ಲಿನೈರುತ್ಯ ದಿಕ್ಕಿಗೂ, ಪಂಚಮೀ-ತ್ರಯೋದಶಿ ಈ ತಿಥಿಗಳಲ್ಲಿವಾಯವ್ಯ ದಿಕ್ಕಿಗೂ, ಅಷ್ಟಮಿ-ಅಮಾವಾಸ್ಯೆ ಈ ತಿಥಿಗಳಲ್ಲಿ ಈಶಾನ್ಯ ದಿಕ್ಕಿಗೂ ಪ್ರಯಾಣ ಮಾಡಕೂಡದು. ಮೇಲ್ಕಂಡ ದಿಕ್ಕುಗಳಲ್ಲಿ ಮೇಲ್ಕಂಡ ತಿಥಿಗಳು ಶೂಲೆಗಳಾದ್ದರಿಂದ ಅವುಗಳನ್ನು ಬಿಡುವುದು.

## ವಾರ ಶೂಲ ವಿಷಯ

➤ ನ ಪೂರ್ವೇ ಶನಿ ಸೋಮೇ ಚ ನ ಗುರುರ್ದಕ್ಷಿಣೇ ತಥಾ ||
ನ ಪಶ್ಚಾದ್ಭಾನುಶುಕ್ರೇ ಚ ನೋತ್ತರೇ ಬುಧಮಂಗಳೇ || 108 ||

**ತಾ ||** ಪೂರ್ವದಿಕ್ಕಿಗೆ ಶನಿವಾರ, ಸೋಮವಾರಗಳು–ದಕ್ಷಿಣ ದಿಕ್ಕಿಗೆ ಗುರುವಾರ, ಪಶ್ಚಿಮ ದಿಕ್ಕಿಗೆ ಭಾನುವಾರ, ಶುಕ್ರವಾರಗಳು – ಉತ್ತರದಿಕ್ಕಿಗೆ ಬುಧವಾರ, ಮಂಗಳವಾರಗಳು ಶೂಲೆಗಳಾದ್ದರಿಂದ ಪ್ರಯಾಣಕೂಡದು.

➤ ಅಂಗಾರಪೂರ್ವ ಗಮನೇಚ ಲಾಭಃ ಸೋಮಶ್ಶನಿರ್ದಕ್ಷಿಣಮರ್ಥಲಾಭಃ |
ಬುಧೌ ಗುರೌ ಪಶ್ಚಿಮ ಕಾರ್ಯಸಿದ್ಧಿಃ ಭಾನೌಭೃಗೌಚೋತ್ತರ ಧಾನ್ಯಲಾಭಃ ||109||

**ತಾ ||** ಮಂಗಳವಾರ ಪೂರ್ವದಿಕ್ಕಿಗೆ ಪ್ರಯಾಣ ಮಾಡಿದರೆ ಲಾಭ. ಸೋಮವಾರ, ಶನಿವಾರಗಳಲ್ಲಿ ದಕ್ಷಿಣದಿಕ್ಕಿಗೆ ಪ್ರಯಾಣ ಮಾಡಿದರೆ ಅರ್ಥಲಾಭ. ಬುಧವಾರ, ಗುರುವಾರಗಳಲ್ಲಿ ಪಶ್ಚಿಮದಿಕ್ಕಿಗೆ ಪ್ರಯಾಣ ಮಾಡಿದರೆ ಕಾರ್ಯಸಿದ್ಧಿ. ಭಾನುವಾರ, ಶುಕ್ರವಾರಗಳಲ್ಲಿ ಉತ್ತರದಿಕ್ಕಿಗೆ ಪ್ರಯಾಣ ಮಾಡಿದರೆ ಧಾನ್ಯಲಾಭವೆಂದು ತಿಳಿಯುವುದು.

## ವಾರದೋಷ ವಿಷಯ

➤ ದ್ವಾವಿಂಶತಿರ್ಗುರೌ ಚೈವ ಬುಧಭೌಮೇ ಚ ದ್ವಾದಶ |
ಅಷ್ಟಾದಶಭಗೌ ಭಾನೌ ಮಂದೇಂದೋಶ್ಚಾಷ್ಟನಾಡಿಕಾಃ ||
ತ್ಯಕ್ತ್ವಾ ಗಚ್ಛೇನ್ನದೋಷಸ್ಯಾನ್ಮೃಕಂಡುವಚನಂ ಯಥಾ || 111 ||

**ತಾ ||** ಗುರುವಾರ ವಾರಶೂಲೆಯಾಗಿದ್ದರೂ 22 ಘಳಿಗೆ ಕಳೆದು ಪ್ರಯಾಣ ಮಾಡಬಹುದೆಂದೂ, ಬುಧವಾರ ಮಂಗಳವಾರ ಶೂಲೆಯಾಗಿದ್ದರೂ 12 ಘಳಿಗೆ ಕಳೆದು ಪ್ರಯಾಣ ಮಾಡಬಹುದೆಂದೂ, ಶುಕ್ರವಾರ ಭಾನುವಾರ ಶೂಲೆಯಾಗಿದ್ದರೂ 18 ಘಳಿಗೆ ಕಳೆದು ಪ್ರಯಾಣ ಮಾಡಬಹುದೆಂದೂ ಶನಿವಾರ ಸೋಮವಾರ ಶೂಲೆಯಾಗಿದ್ದರೂ 8 ಘಳಿಗೆ ಕಳೆದು ಪ್ರಯಾಣ ಮಾಡಬಹುದೆಂದೂ ಮಾರ್ಕಂಡೇಯ ಋಷಿಗಳು ಹೇಳಿರುವರು.

## ವಾರಶೂಲ ಶಾಂತಿ ವಿಷಯ

➢ ಇಂದ್ರಂ ದಧಿ ಯಮಂ ತೈಲಂ। ವಾರುಣಂ ಗುಡಮೇವಚ ॥
ಉತ್ತರೇ ಕ್ಷೀರಮಾಹಾರಂ ॥ ಕೃತ್ವಾ ಗಚ್ಛೇತ್ ಸ ದೋಷಭಾಕ್ ॥ 112 ॥

ತಾ ॥ ವಾರಶೂಲೆಯ ದಿನಗಳಲ್ಲಿ ಪೂರ್ವದಿಕ್ಕಿಗೆ ಪ್ರಯಾಣ ಮಾಡಬೇಕಾದಲ್ಲಿ ಮೊಸರನ್ನ ಸೇವಿಸಿ ಹೊರಟರೆ ದೋಷವಿಲ್ಲ. ದಕ್ಷಿಣದಿಕ್ಕಿಗೆ ಪ್ರಯಾಣ ಹೋಗುವಾಗ್ಯೆ ಅಭ್ಯಂಜನ ಮಾಡಿ ಹೊರಟರೆ ದೋಷವಿಲ್ಲ. ಪಶ್ಚಿಮದಿಕ್ಕಿಗೆ ಹೋಗುವಾಗ್ಯೆ ಗುಡಾನ್ನ ಸೇವಿಸಿ ಹೊರಟರೆ ದೋಷವಿಲ್ಲ. ಉತ್ತರದಿಕ್ಕಿಗೆ ಹೊರಡುವ ಮೊದಲು ಕ್ಷೀರಾನ್ನ ಸೇವಿಸಿ ಹೊರಟರೆ ದೋಷವಿಲ್ಲ.

## ವಾರ ಫಲ

➢ ಭಾನುವಾರೇ ಮನಃಕ್ಲೇಶಃ । ಸೋಮೇ ಬಂಧು ಸಮಾಗಮಃ ॥
ಮಂಗಳೇ ಜ್ವರಭಯಂ ಬುಧೇ ದ್ರವ್ಯಂ ಗುರೌ ಸುಖಂ ॥
ಶುಕ್ರೇ ಲಾಭಃ ಶನೌ ಹಾನಿಃ । ವಾರಾಣಾಂ ಫಲಮುತ್ತಮಂ ॥ 113 ॥

ತಾ ॥ ಭಾನುವಾರ ಪ್ರಯಾಣ ಮಾಡಿದರೆ ಮನಃಕ್ಲೇಶ, ಸೋಮವಾರ ಬಂಧು ಸಮಾಗಮ, ಮಂಗಳವಾರ ಬೆಂಕಿ ಮತ್ತು ಜ್ವರದ ಭಯ, ಬುಧವಾರ ಸುಖಪ್ರದ, ಶುಕ್ರವಾರ ಲಾಭ, ಶನಿವಾರ ಹಾನಿ ಎಂದು ತಿಳಿಯುವುದು.

## ಪ್ರಯಾಣ ನಕ್ಷತ್ರಗಳು

➢ ಮೃಗಾಶ್ವಿನೀ ಪುಷ್ಯ ಪುನರ್ವಸೂಚ ಹಸ್ತಾನುರಾಧಾ ಶ್ರವಣಂ ಚ ಮೂಲಾ ॥
ಧನಿಷ್ಠರೇವತ್ಯೇಗತೇ ಪ್ರಯಾಣಂ ಫಲಂ ಲಭೇಚ್ಛೀಘ್ರ ನಿವರ್ತನಂ ಚ ॥114॥

ತಾ ॥ ಅಶ್ವಿನಿ, ಮೃಗಶಿರ, ಪುಷ್ಯ, ಪುನರ್ವಸು, ಹಸ್ತ, ಅನೂರಾಧ, ಶ್ರವಣ, ಮೂಲ, ಧನಿಷ್ಠ, ರೇವತಿ ಈ ಹತ್ತು ನಕ್ಷತ್ರಗಳಲ್ಲಿ ಪ್ರಯಾಣ ಮಾಡಿದಲ್ಲಿ ನಿರ್ಧರಿಸಿದ ಕಾರ್ಯ ಶೀಘ್ರದಲ್ಲಿ ಕೈಗೂಡಿ ಸುಖವಾಗಿ ಹಿಂದಿರುಗಿ ಬರುವರೆಂದು ತಿಳಿಯುವುದು.

## ಪ್ರಯಾಣಕ್ಕೆ ನಿಷೇಧ ನಕ್ಷತ್ರಗಳು

➤ ತ್ರೀಣಿಪೂರ್ವ ಮಘಾ ಜ್ಯೇಷ್ಠಾ ಭರಣೀ ಜನ್ಮ ಕೃತ್ತಿಕಾ ॥
ಸ್ವಾತಿ ಸಾರ್ಪ ವಿಶಾಖಾರ್ದ್ರಾ ಚಿತ್ತಾಗಮನವರ್ಜಿತಾ ॥ 115 ॥

ತಾ॥ ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ, ಮಖ, ಜ್ಯೇಷ್ಠ, ಭರಣಿ, ಜನ್ಮನಕ್ಷತ್ರ, ಕೃತ್ತಿಕ, ಸ್ವಾತಿ, ಆಶ್ಲೇಷ, ವಿಶಾಖ, ಆರ್ದ್ರಾ, ಚಿತ್ತ ಈ 13 ನಕ್ಷತ್ರಗಳು ಪ್ರಯಾಣಕ್ಕೆ ನಿಷಿದ್ಧ ಈ ನಕ್ಷತ್ರಗಳಲ್ಲಿ ಪ್ರಯಾಣ ಮಾಡಿದಲ್ಲಿ ಅರಿಷ್ಟ ಸಂಭವಿಸುವುದು.

## ಈ ನಕ್ಷತ್ರಗಳಲ್ಲಿ ತ್ಯಾಜ್ಯ ಘಳಿಗೆಗಳು

➤ ಭರಣ್ಯಾಂ ಸಪ್ತನಾಡ್ಯಶ್ಚ ಕೃತ್ತಿಕಾಯಾಂ ತ್ರಯೋದಶ ।
ಏಕಾದಶ ಮಘಾಯಾಂತು ತ್ರಿಪೂರ್ವಾಯಾಂತು ಷೋಡಶ ॥
ಪಂಚಾಧಿಕದಶಜ್ಯೇಷ್ಠಾ ವರ್ಜಯೇತ್ಪರತಶ್ಶುಭಂ ॥ 117 ॥

ತಾ॥ ಭರಣಿ ನಕ್ಷತ್ರದಲ್ಲಿ 7 ಘಳಿಗೆಗಳೂ, ಕೃತ್ತಿಕೆಯಲ್ಲಿ 13 ಘಳಿಗೆಗಳು, ಮಖೆಯಲ್ಲಿ 11 ಘಳಿಗೆಗಳು, ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರಗಳಲ್ಲಿ 16 ಘಳಿಗೆಗಳು, ಜ್ಯೇಷ್ಠದಲ್ಲಿ 15 ಘಳಿಗೆಗಳನ್ನೂ ಬಿಟ್ಟು ಪ್ರಯಾಣ ಮಾಡಿದಲ್ಲಿ ಮೇಲ್ಕಂಡ ನಕ್ಷತ್ರ ದೋಷವಿರುವುದಿಲ್ಲ ಎಂಬುದಾಗಿ ಹೇಳಿರುವುದು.

## ತಿಥಿ ತ್ಯಾಜ್ಯ ವಿಷಯ

➤ ಹಯೊಹರೊನಯೊನಾಗೋ ವರಂನಾರಂಕರಂಪರಂ ॥
ಧರಂಜರಂ ಹರಂಹಾರಂ ವರಂಸಾಕಂವಲಂರಣಂ ॥
ಏತೇ ತಿಥಿ ವಿಷಾಃ ಪ್ರೋಕ್ತಾಃ ಚತ್ವಾರೋ ವಿಷಸಾಧಿಕಾಃ ॥ 118 ॥

ತಾ ॥ ಪ್ರತಿಪತ್ತಿನಲ್ಲಿ 18 ಘಳಿಗೆ ಮೇಲೆ 12 ಘಳಿಗೆವರೆವಿಗೂ, ಬಿದಿಗೆಯಲ್ಲಿ 29 ಘಳಿಗೆ ಮೇಲೆ 32 ಘಳಿಗೆವರೆವಿಗೂ, ತದಿಗೆಯಲ್ಲಿ 10 ಘಳಿಗೆ ಮೇಲೆ 14 ಘಳಿಗೆ ವರೆವಿಗೂ, ಚತುರ್ಥಿಯಲ್ಲಿ 30 ಘಳಿಗೆ ಮೇಲೆ 32 ಘಳಿಗೆವರೆವಿಗೂ, ಪಂಚಮಿಯಲ್ಲಿ 24 ಘಳಿಗೆ ಮೇಲೆ 28 ಘಳಿಗೆವರೆವಿಗೂ, ಷಷ್ಠಿಯಲ್ಲಿ 20 ಘಳಿಗೆ ಮೇಲೆ 24 ಘಳಿಗೆವರೆವಿಗೂ, ಸಪ್ತಮಿಯಲ್ಲಿ 21 ಘಳಿಗೆ ಮೇಲೆ 25 ಘಳಿಗೆವರೆವಿಗೂ, ಅಷ್ಟಮಿಯಲ್ಲಿ 12 ಘಳಿಗೆ ಮೇಲೆ 25 ಘಳಿಗೆವರೆವಿಗೂ, ನವಮಿ, ದಶಮಿ, ಏಕಾದಶಿ, ದ್ವಾದಶಿ ತಿಥಿಗಳಲ್ಲಿ 28 ಘಳಿಗೆವರೆವಿಗೂ, ಚತುರ್ದಶಿಯಲ್ಲಿ 12 ಘಳಿಗೆ ಮೇಲೆ 21 ಘಳಿಗೆವರೆವಿಗೂ, ಪೂರ್ಣಿಮೆಯಲ್ಲಿ 34 ಘಳಿಗೆ ಮೇಲೆ 38 ಘಳಿಗೆವರೆವಿಗೂ, ಅಮಾವಾಸ್ಯೆಯಲ್ಲಿ 52

ಘಳಿಗೆ ಮೇಲೆ 56 ಘಳಿಗೆವರೆವಿಗೂ ವಿಷಘಳಿಗೆಗಳಾದ್ದರಿಂದ ಉಕ್ತಕಾಲದಲ್ಲಿ ಶುಭಕಾರ್ಯ ಮಾಡಕೂಡದು.

## ನಕ್ಷತ್ರ ತ್ಯಾಜ್ಯ ವಿಷಯ

➤ ಮೃಗಸ್ವಾತೀ ವಿಶಾಖಾಸು ಜ್ಯೇಷ್ಠೇ ಚೈವ ಚತುರ್ದಶ ॥
ಪುಷ್ಯ ಪುಬ್ಬಾಸುಚಿತ್ತಾಸು ಉತ್ತರಾಷಾಢವಿಂಶತಿ ॥ 119 ॥
ಉತ್ತರಾಭಾದ್ರ ಭರಣೀ ಪೂರ್ವಾಷಾಢಾ ತ್ರಯಷ್ಟಕಂ ।
ಶ್ರವಣೇ ದಶಸಂಖ್ಯಾಕಾ ಹ್ಯನೂರಾಧಾ ಧನಿಷ್ಠಯೋಃ ॥ 120 ॥
ಮೂಲಾವಿಂಶತಿ ಛಪ್ಪನ್ನಂ ದ್ವಾತ್ರಿಂತತ್ಸಾರ್ವ ಏವಚ ।
ರೋಹಿಣ್ಯಾಂ ವಿಷಸಂಯುಕ್ತಾನಾಡಿಕಾವನಸಂಖ್ಯಕಾಃ ॥ 121 ॥
ಕೃತ್ತಿಕಾ ಮುಖರೇವತ್ಯಾಂ ಪುನರ್ವಸುನಶತ್ರಿಕಂ ॥
ಆರ್ದ್ರಾಯಾಂ ಹಸ್ತ ತಾರ್ಧಾಯಾಂ ಏಕವಿಂಶತಿನಾಡಿಕಾಃ ॥ 122 ॥
ಉತ್ತರಾಶತತಾರಾಯಾಂ ಅಷ್ಟಾದಶ ಘಟೀಸ್ತಥಾ ॥
ಪೂರ್ವಾಭಾದ್ರ ಷೋಡಶಸ್ಯಾದಶ್ವಿನೀಪನ್ನ ಏವಚ ।
ಜ್ಯೋತಿಶ್ಯಾಸ್ತ್ರೇ ಸಮಾಖ್ಯಾತಾ ಚತ್ವಾರೋ ವಿಷನಾಡಿಕಾಃ ॥ 123 ॥

ತಾ ॥ ಅಶ್ವಿನಿ 50, ಭರಣಿ 24, ಕೃತ್ತಿಕ 30, ರೋಹಿಣಿ 40, ಮೃಗಶಿರ 14, ಆರ್ದ್ರಾ 21, ಪುನರ್ವಸು 30, ಪುಷ್ಯ 20, ಆಶ್ಲೇಷ 32, ಮಖ 30, ಪುಬ್ಬ 20, ಉತ್ತರ 18, ಹಸ್ತ 21, ಚಿತ್ತ 20, ಸ್ವಾತಿ 14, ವಿಶಾಖ 14, ಅನೂರಾಧ 10, ಜ್ಯೇಷ್ಠ 14, ಮೂಲ 20, ಪೂರ್ವಾಷಾಢ 24, ಉತ್ತರಾಷಾಢ 20, ಶ್ರವಣ 10, ಧನಿಷ್ಠ 10, ಶತಭಿಷ 18, ಪೂರ್ವಾಭಾದ್ರ 16, ಉತ್ತರಾಭಾದ್ರ 24, ರೇವತಿ 30 – ಈ ರೀತಿ ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಉಕ್ತವಾಗಿರುವ ಘಳಿಗೆಗಳಿಗೆ ಮೇಲೆ 4 ಘಳಿಗೆಗಳವರೆವಿಗೂ ನಕ್ಷತ್ರತ್ಯಾಜ್ಯವಾದ್ದರಿಂದ ಈ ಉಕ್ತಕಾಲದಲ್ಲಿ ಯಾವ ಶುಭ ಕಾರ್ಯವನ್ನೂ ಮಾಡಕೂಡದೆಂದು ಹೇಳಿರುವುದು.

## ಯೋಗ ತ್ಯಾಜ್ಯ ವಿಷಯ

➤ ಯೋಗಂ ವೀರಸಮಾಶೀಲಃ ಶೋಕಂ ಶಾಪಂ ಮಯಾರವಿಃ ।
ವೇಶಃ ಫಲಕೃತಾವಾಮ ಯಾಮಸೋಮತನುಸ್ಸಮಾಃ ॥124॥
ನಾಯಂಕಾಲ ಭಯಾದೇಯಾ ಮಾಯಾಗಾನಂ ರವೀಮಯಾ ।
ಸಾಲತಾಯರವಿಶ್ಚೈವ ಯೋಗತ್ಯಾಜ್ಯ ಘಟೀಕ್ರಮಾತ್ ॥ 125 ॥

ತಾ ॥ ವಿಷ್ಕಂಭಕ್ಕೆ 31, ಪ್ರೀತಿ 24, ಆಯುಷ್ಮಾನ್ 57, ಸೌಭಾಗ್ಯ 35, ಶೋಭನ 13, ಅತಿಗಂಡ 15, ಸುಕರ್ಮ 15, ಧೃತಿಶೂಲ 58, ಗಂಡ 31, ವೃದ್ಧಿಧ್ರುವ 54, ವ್ಯಾಘಾತ 51, ಹರ್ಷಣ 56, ವಜ್ರ 60, ಸಿದ್ಧಿ 57, ವ್ಯತೀಪಾತ 17, ವರಿಯಾನ್ 31, ಪರಿಘ 31, ಶಿವ 18, ಸಿದ್ಧಿ 15, ಸಾಧ್ಯ 30, ಶುಭ 24, ಶುಕ್ಲ 15, ಬ್ರಹ್ಮ 37, ಐಂದ್ರ 16, ವೈಧೃತಿ 24 ಈ ಪ್ರಕಾರವಾಗಿ ವಿಷ್ಕಂಭಾದಿ ಯೋಗಗಳಲ್ಲಿ ಉಕ್ತವಾಗಿರುವ ಘಳಿಗೆಗಳು ತ್ಯಾಜ್ಯಕಾಲಗಳೆಂದು ಉಕ್ತವಾಗಿರುತ್ತದೆ.

## ಕರಣ ತ್ಯಾಜ್ಯ ವಿಷಯ

➤ ತೀರಂ ವನಂ ಪಟುರ್ದಾನಂ ಕಲ್ಯೋ ನಾರೀ ವನಂ ವನಂ ॥
ಸಾಕಂ ದಾನಂ ವನಂ ಚೈವ ಕರುಣೇಷು ವಿಷಂ ಕ್ರಮಾತ್ ॥ 126 ॥

ತಾ ॥ ಬವ 26, ಬಾಲವ 40, ಕೌಲವ 10, ತೈತುಲ 8, ಗರಜ 13, ವಣಿಜ 20, ಶಕುನಿ 40, ಭದ್ರ 40, ಚತುಷ್ಪಾತ್ 17, ನಾಗವಾನ್ 8, ಕಿಮಸ್ತುಘ್ನ 40 – ಈ ಪ್ರಕಾರವಾಗಿ ಬವಾದಿ ಕರಣಗಳಲ್ಲಿ ಉಕ್ತವಾಗಿರುವ ಕಾಲ ಮೊದಲು 4 ಘಳಿಗೆಗಳು ತ್ಯಾಜ್ಯಗಳಾದ್ದರಿಂದ, ಈ ಕಾಲಗಳಲ್ಲಿ ಶುಭಕಾರ್ಯಗಳನ್ನು ಮಾಡಕೂಡದು.

## ಪ್ರಯಾಣ ಲಗ್ನಫಲ

➤ ಚಾಪೇ ಶತ್ರುಜಯಂ ವೃಷೇ ಶುಭಮಿಯಾತ್ಕನ್ಯಾ ಗೃಹೇರುಗ್ಭಯಂ।
ಕರ್ಕೇ ಭೂಮಿಭೃತಾಶುಭಂ ಹರಿಗ್ರಹೇ ದಹ ವ್ರಣಂ ವೃಶ್ಚಿಕೇ ॥
ಮೃತ್ಯುರೇಷಯಮೌ ತುಲಾಚ ವಿಜಯೀ ಕಾರಾಗೃಹಂ ನಕ್ರಭೇ ।
ಮೀನೇ ವೃಷ್ಟಿಭಯಂ ಪ್ರಯಾಣಸಮಯೇ ಕುಂಭೇಪ್ರಹಾರಂ ತಥಾ ॥ 127॥

ತಾ । ಧನುರ್ಲಗ್ನದಲ್ಲಿ ಪ್ರಯಾಣ ಮಾಡಿದರೆ ಶತ್ರುಭಯ, ವೃಷಭದಲ್ಲಿ ಶುಭ, ಕನ್ಯೆಯಲ್ಲಿ ಆಲಸ್ಯ, ಕರ್ಕಾಟಕದಲ್ಲಿ ರಾಜಾನುಗ್ರಹ, ಸಿಂಹದಲ್ಲಿ ದೇಹಾಲಸ್ಯ, ವೃಶ್ಚಿಕದಲ್ಲಿ ವ್ಯಾಧಿ, ಮೇಷಮಿಥುನಗಳಲ್ಲಿ ಮೃತ್ಯು, ತುಲಾದಲ್ಲಿ ಜಯ, ಮಕರದಲ್ಲಿ ಕಾರಾಗಾರ ಪ್ರಾಪ್ತಿ, ಕುಂಭದಲ್ಲಿ ಪ್ರಹರ, ಮೀನದಲ್ಲಿ ಹರ್ಷ – ಈ ಪ್ರಕಾರ ಮೇಷಾದಿ ಲಗ್ನಗಳಲ್ಲಿ ಪ್ರಯಾಣಕರ್ತನು ಫಲವನ್ನು ಹೊಂದುವನಾದ್ದರಿಂದ ಉತ್ತಮ ಲಗ್ನಗಳಲ್ಲಿ ಪ್ರಯಾಣ ಮಾಡುವುದು ಶುಭಕರವು.

## ಲಗ್ನ ತ್ಯಾಜ್ಯ ವಿಷಯ

➢ ಅಜ ವೃಷಭ ಧನುಃ ಕನ್ಯಕಾದೌ ಭುಜಂಗಂ ।
ಝುಷ ಮಕರ ಕುಳೀರೇ ವೃಶ್ಚಿಕೌಂತೇ ಚ ರಾಹುಃ ॥
ಘಟ ಮಿಥುನ ತುಲಾನಾಂ ಸಿಂಹಮಧ್ಯೇಚ ಗೃಧ್ರಃ ।
ಸಕಲಮುನಿಮತಂ ಸ್ಯಾದರ್ಧನಾಡೀ ವಿವರ್ಜ್ಯಂ ॥ 128 ॥

ತಾ ॥ ಮೇಷ, ವೃಷಭ, ಧನುಸ್ಸು, ಕನ್ಯಾರಾಶಿಗಳಲ್ಲಿ ಮೊದಲು ಅರ್ಧ ಘಳಿಗೆ ಭುಜಂಗವೆಂಬ ತ್ಯಾಜ್ಯವಿರುವುದು. ಮೀನ, ಮಕರ, ಕರ್ಕಾಟಕ, ವೃಶ್ಚಿಕ ರಾಶಿಗಳ ಅಂತ್ಯಭಾಗದಲ್ಲಿ ಅರ್ಧ ಘಳಿಗೆ ರಾಹುವೆಂಬ ತ್ಯಾಜ್ಯ ಇರುವುದು. ಕುಂಭ, ಮಿಥುನ, ತುಲಾ, ಸಿಂಹರಾಶಿಗಳ ಮಧ್ಯಭಾಗದಲ್ಲಿ ಗೃಧ್ರವೆಂಬ ತ್ಯಾಜ್ಯವಿರುವುದು. ಶುಭಕಾರ್ಯ ಮಾಡತಕ್ಕವರು ಈ ತ್ಯಾಜ್ಯ ಕಾಲಗಳನ್ನು ಬಿಡಬೇಕೆಂದು ಹೇಳಿರುವುದು.

## ನಕ್ಷತ್ರಗಳಲ್ಲಿ ಅಮೃತಕಾಲಗಳು

➢ ಅಶ್ವಿನೀ ಮೃಗಶಿರಾತಿಷ್ಯ ಪೂರ್ವಾಭಾದ್ರಾಸ್ತ್ರಯಷ್ಟಕಂ ॥
ದ್ವಾವಿಂಶತಿಯಮರ್ಕ್ಷೇಽಚ ಕೃತ್ತಿಕಾ ಹಸ್ತಚಿತ್ತಯೋಃ ॥ 129 ॥
ಆಶ್ಲೇಷೋತ್ತರ ರುದ್ರೇಂದ್ರ ಮೂಲ ಮಿತ್ರಸುತಾರಕಾಃ ॥
ಮನುಸಂಖ್ಯಾ ಘಟೀಚೈವ ಷಡ್ವಿಂಶತಿಪುನರ್ವಸೂ ॥ 130 ॥
ಪಿತ್ರೋತ್ತರಾಭಾದ್ರ ಹರೀ ಘಟಿದ್ವಾದಶಸಂಖ್ಯಕಾಃ ॥
ಪುಬ್ಬಾಚತುರ್ವಿಂಶತೀಚ ಪೂರ್ವಾಷಾಢಾ ಚ ವಿಶ್ವಭಂ ॥ 131 ॥
ತ್ರಯೋದಶಘಟೀಚೈವ ಚತ್ವಾರಿಸ್ವಾತಿಋಕ್ಷಕೇ ॥
ಧನಿಷ್ಠಾ ದಶನಾಡೀ ಚ ಶತತಾರಕಭೇತಥಾ ॥ 132 ॥
ಅಷ್ಟಾದಶ ಘಟೀಚೈವ ಅಮೃತಾಶ್ಚ ಪ್ರಕೀರ್ತಿತಾಃ ।
ಸಮಸ್ತ ಶುಭಕಾರ್ಯಾಣಿ ಚತ್ವಾರೋಽಮೃತನಾಡಿಕಾಃ ॥ 133 ॥

ತಾ ॥ ಅಶ್ವಿನಿ 24, ಭರಣಿ 22, ಕೃತ್ತಿಕಾ 22, ರೋಹಿಣಿ 5, ಮೃಗಶಿರ 24, ಆದ್ರಾ 14, ಪುನರ್ವಸು 26, ಪುಷ್ಯಮಿ 24, ಆಶ್ಲೇಷ 14, ಮಖ 14, ಪುಬ್ಬ 24, ಉತ್ತರ 14, ಹಸ್ತ 22, ಚಿತ್ತ 18, ಸ್ವಾತಿ 4, ವಿಶಾಖ 8, ಅನೂರಾಧ 14, ಜ್ಯೇಷ್ಠ 14, ಮೂಲ 14, ಪೂರ್ವಾಷಾಢ 13, ಉತ್ತರಾಷಾಢ 13, ಶ್ರವಣ 12, ಧನಿಷ್ಠ 10, ಶತಭಿಷ 28, ಪೂರ್ವಾಭಾದ್ರ 24, ಉತ್ತರಾಭಾದ್ರ 12, ರೇವತಿ 18 – ಈ ಪ್ರಕಾರವಾಗಿ ಅಶ್ವಿನ್ಯಾದಿ 27 ನಕ್ಷತ್ರಗಳಲ್ಲಿ ಉಕ್ತವಾಗಿರುವ ಘಳಿಗೆಗಳ ಮೇಲೆ 4 ಘಳಿಗೆಗಳವರೆವಿಗೆ ಅಮೃತಕಾಲವಾದ್ದರಿಂದ ಸಕಲ ಕಾರ್ಯಸಿದ್ಧಿಪ್ರದವೆಂದು ತಿಳಿಯುವುದು.

## ಅಮೃತಸಿದ್ಧಿಯೋಗಗಳು

➢ ಆದಿತ್ಯಹಸ್ತೋ ಗುರುಪುಷ್ಯಯೋಗೋ ಬುಧಾನುರಾಧಶ್ಶನಿ ರೋಹಿಣೀಚ ।
ಶ್ರೋಣೇಂದುವಾರೋ ಭೃಗುರೇವತೀ ಚ ಭೌಮಾಶ್ವಿನೀ ಚ ಅಮೃತಸಿದ್ಧಿಯೋಗಃ ||134||

**ತಾ ||** ಭಾನುವಾರ ಹಸ್ತನಕ್ಷತ್ರ, ಗುರುವಾರ ಪುಷ್ಯ ನಕ್ಷತ್ರ, ಬುಧವಾರ ಅನೂರಾಧ ನಕ್ಷತ್ರ, ಶನಿವಾರ ರೋಹಿಣಿ ನಕ್ಷತ್ರ, ಸೋಮವಾರ ಶ್ರವಣ ನಕ್ಷತ್ರ, ಶುಕ್ರವಾರ ರೇವತಿ ನಕ್ಷತ್ರ, ಮಂಗಳವಾರ ಅಶ್ವಿನೀ ನಕ್ಷತ್ರ ಸೇರಿದ ದಿನಗಳು ಅಮೃತಸಿದ್ಧಿಯೋಗ ದಿನಗಳೆನ್ನಿಸಿಕೊಳ್ಳುವುದು. ಸಮಸ್ತ ಶುಭ ಕಾರ್ಯಗಳಿಗೂ ಶುಭಪ್ರದವು.

## ದಗ್ಧಯೋಗಗಳು

➢ ಬುಧತೃತೀಯಾ ಕುಜವಾರೇ ಪಂಚಮೀ ।
ಗುರೌತು ಷಷ್ಠೀ ಭೃಗುವಾಸರಾಷ್ಟಮೀ ಏಕಾದಶೀ ಸೋಮ ಶನಿರ್ನವಮ್ಯಾಂ ||
ಭಾನುಸ್ತಥಾ ದ್ವಾದಶಿ ದಗ್ಧಯೋಗಃ ||135||

**ತಾ ||** ತದಿಗೆ ಬುಧವಾರ, ಪಂಚಮಿ ಮಂಗಳವಾರ, ಷಷ್ಠಿ ಗುರುವಾರ, ಅಷ್ಟಮಿ ಶುಕ್ರವಾರ, ಏಕಾದಶಿ ಸೋಮವಾರ, ನವಮಿ ಶನಿವಾರ,ದ್ವಾದಶಿ ಭಾನುವಾರ ಸೇರಿದರೆ ಈ ದಿನಗಳಿಗೆ ದಗ್ಧಯೋಗವೆನಿಸಿಕೊಳ್ಳುವುದು. ಯಾವ ಶುಭಕಾರ್ಯಗಳಿಗೂ ಪ್ರಶಸ್ತವಲ್ಲ.

## ಮೃತ್ಯುಯೋಗಗಳು

➢ ತ್ಯಜರವಿಮನುರಾಧಾಹ್ಯುತ್ತರಾಷಾಢ ಚಂದ್ರಂ ||
ಶತಭಿಷ ಇತಿ ಭೌಮಾಂಚಾಶ್ವಿನೀ ಸೋಮಪುತ್ರಂ ||
ಮೃಗಶಿರ ಗುರುವಾರಂ ಸಾರ್ಪಭಂ ಭಾರ್ಗವಾರೇ ।
ರವಿಸುತಯುತ ಹಸ್ತಂ ಮೃತ್ಯುಯೋಗಂ ವದಂತಿ ||136||

**ತಾ ||** ಭಾನುವಾರ ಅನೂರಾಧ ನಕ್ಷತ್ರ, ಸೋಮವಾರ ಉತ್ತರಾಷಾಢ ನಕ್ಷತ್ರ, ಮಂಗಳವಾರ ಶತಭಿಷಾ ನಕ್ಷತ್ರ, ಬುಧವಾರ ಅಶ್ವಿನೀ ನಕ್ಷತ್ರ, ಗುರುವಾರ ಮೃಗಶಿರಾ ನಕ್ಷತ್ರ, ಶುಕ್ರವಾರ ಆಶ್ಲೇಷಾ ನಕ್ಷತ್ರ, ಶನಿವಾರ ಹಸ್ತ ನಕ್ಷತ್ರ ಸೇರಿದ್ದೇ ಆದರೆ ಈ ದಿನಗಳಿಗೆ ಮೃತ್ಯುಯೋಗವೆಂದು, ಶುಭ ಕಾರ್ಯಗಳಲ್ಲಿ ನಿಂದ್ಯವಾದವುಗಳೆಂದು ತಿಳಿಯುವುದು.

## ದಿಗ್ರಾಹು ವಿಷಯ

➢ ರವಿಗುರುದಿನಪೂರ್ವೇ ಸೋಮಶುಕ್ರೇಚಯಾಮ್ಯೇ ವರುಣದಿಶಿತುಭೌಮೇ ಚೋತ್ತರೇ ಸೌರಿಸೌಮ್ಯೇ ॥ ಪ್ರತಿದಿನ ಗಮನತ್ವಾತ್ಕಾಲರಾಹುರ್ನರಾಣಾಂ । ಭವತಿ ಸಕಲಕಾರ್ಯಂ ವಾಮಪೃಷ್ಠೇರ್ಥಸಿದ್ಧಿಃ ॥137॥

ತಾ ॥ ಭಾನುವಾರ-ಗುರುವಾರಗಳಲ್ಲಿ ಪೂರ್ವದಿಕ್ಕಿನಲ್ಲಿ, ಸೋಮವಾರ-ಶುಕ್ರವಾರಗಳಲ್ಲಿ ದಕ್ಷಿಣದಿಕ್ಕಿನಲ್ಲಿ, ಮಂಗಳವಾರ ಪಶ್ಚಿಮದಿಕ್ಕಿನಲ್ಲಿ, ಶನಿವಾರ-ಬುಧವಾರಗಳಲ್ಲಿ ಉತ್ತರದಿಕ್ಕಿನಲ್ಲಿ ಕಾಲರಾಹು ಇರುವುದರಿಂದ ಪ್ರಯಾಣ ಮಾಡುವವನಿಗೆ ವಾಮಪಾರ್ಶ್ವದಲ್ಲಿಯೂ, ಬೆನ್ನಿನ ಕಡೆಯಲ್ಲಿಯೂ ಇದ್ದರೆ ಸಕಲ ಕಾರ್ಯಸಿದ್ಧಿಯೆಂದು ಉಕ್ತವಾಗಿದೆ.

## ರಾಹುಕಾಲ ವಿಷಯ

➢ ಸಪಾದಷಡ್ವಿಂಶತಿರರ್ಕವಾಸರೇ ಸೋಮೇಚಪಾದೋ ನ ಚತುಷ್ಟಯಂಸ್ಯಾತ್ ॥
ದ್ವಾವಿಂಶತಿಸ್ಸಾರ್ಧಯುತಾ ಕುಜೇ ಚ ಪಕ್ಷಪ್ರಮಾಣಂ ತು ದಿನೇಶಪುತ್ರೇ ॥138॥
ಸಪಾದಮಷ್ಟಾದಶದೇವ ಪೂಜ್ಯೇ ತ್ರಿಪಾದು ರುದ್ರೋಭೃಗುನಂದನಸ್ಯ ॥
ಶನೈಶ್ಚರಚೈವ ತಥಾ ತ್ರಿಸಪ್ತ ಭುಜಂಗಕಾಲಸ್ತ್ರಿಘಟೀತ್ರಿಪಾದಂ ॥139॥

ತಾ ॥ ಭಾನುವಾರ– 26 $^{1}/_{4}$ ಘಳಿಗೆ ಮೇಲೆ, ಸೋಮವಾರ 3 $^{3}/_{4}$ ಘಳಿಗೆ ಮೇಲೆ, ಮಂಗಳವಾರ 22 $^{1}/_{2}$ ಘಳಿಗೆ ಮೇಲೆ, ಬುಧವಾರ 15 $^{1}/_{2}$ ಮೇಲೆ, ಗುರುವಾರ 18 $^{1}/_{4}$ ಘಳಿಗೆ ಮೇಲೆ, ಶುಕ್ರವಾರ 11 $^{3}/_{4}$ ಘಳಿಗೆ ಮೇಲೆ, ಶನಿವಾರ 21$^{1}/_{4}$ ಘಳಿಗೆ ಮೇಲೆ ರಾಹುಕಾಲ ಪ್ರಾರಂಭವಾಗಿ 3$^{1}/_{2}$ ಘಳಿಗೆ ಪರ್ಯಂತಕ್ಕೂ ಇರುವುದು. ಈ ರಾಹುಕಾಲ ದಲ್ಲಿ ಯಾವ ಶುಭ ಕಾರ್ಯವನ್ನೂ ಮಾಡಕೂಡದೆಂದು ಉಕ್ತವಾಗಿರುವುದು.

## ಯೋಗಿನೀ ವಿಷಯ

➢ ಶತಮಖೇಂದು ಹುತಾಶನ ರಕ್ಷಸಾಂ ಯಮಜಲೇಶ ಸಮೀರಥ ಶೂಲಿನಃ ॥
ದಿವಿಭುವಿಕ್ರಮಶಃ ಪರಿವರ್ತತೇ ಸಿತತಿಥಿಃ ಪ್ರಥಮಾದಿಷು ಯೋಗಿನೀ ॥140॥

ತಾ ॥ ಇಂದ್ರದಿಕ್ಕು ಶುದ್ಧ 1, 11, ಕೃ 6, ಅಗ್ನಿದಿಕ್ಕು ಶುದ್ಧ 3, 13, ಕೃ 8, ಯಮದಿಕ್ಕು ಶುದ್ಧ 6, ಕೃ 11, ವಾಯವ್ಯದಿಕ್ಕು ಶುದ್ಧ 7, ಕೃ 2, 12, ಕುಬೇರದಿಕ್ಕು ಶುದ್ಧ 9, ಕೃ7,

ಈಶಾನ್ಯದಿಕ್ಕು ಶುದ್ಧ 8, ಕೃ 3, 13, ದಿವಿ ಶುದ್ಧ 9, ಕೃ 4, 18, ಭುವಿ ಶುದ್ಧ 10, ಕೃ 5, 30 – ಈ ಮೇರೆಗೆ ಯೋಗಿನೀ ಚಕ್ರೋದ್ಧಾರವನ್ನು ಮಾಡಿ ಫಲವನ್ನು ತಿಳಿದು ಪ್ರಯಾಣ ಮಾಡುವುದು ಸರ್ವಶ್ರೇಷ್ಠ.

## ಸಾತ್ವಿಕ ರಾಜಸ ತಾಮಸ ವೇಳೆಗಳು

➢ **ಗುರ್ವಿಂದೋರುದಯೇಸತಃ ಕುಜಭರ್ಗೋರುದಯೇರಜಃ ||**
**ಆದಿತ್ಯಬುಧಮಂದಾನಾಂ ತಮೋನಾಡೀ ಚತುಷ್ಟಯಮ್ ||141||**
**ಸತ್ವೇ ಮಹಾಫಲಂ ಶೀಘ್ರಂ ರಾಜಸೇ ರಾಜಪೂಜ್ಯತಾ ||**
**ತಾಮಸೇ ನಿಷ್ಫಲಂ ಚೈವ ವೇಳಾತ್ರಯಫಲಂ ಭವೇತ್ ||142||**

**ತಾ ||** ಗುರುವಾರ-ಸೋಮವಾರಗಳ ಉದಯಾದಿ 4 ಘಳಿಗೆಗಳವರೆವಿಗೆ ಸಾತ್ವಿಕವೇಳೆ, ಮಂಗಳವಾರ-ಶುಕ್ರವಾರಗಳ ಉದಯಾದಿ 4 ಘಳಿಗೆಗಳವರೆವಿಗೆ ರಾಜಸ ವೇಳೆ, ಭಾನುವಾರ, ಬುಧವಾರ, ಶನಿವಾರಗಳ ಉದಯಾದಿ 4 ಘಳಿಗೆಗಳವರೆವಿಗೆ ತಾಮಸವೇಳೆಯೆಂಬುದಾಗಿ ತಿಳಿಯುವುದು. ಅಲ್ಲದೆ ಸಾತ್ವಿಕಕಾಲದಲ್ಲಿ ಶೀಘ್ರದಲ್ಲಿ ಮಹಾಫಲ ಪ್ರಾಪ್ತಿಯಾಗುವುದೆಂದೂ, ರಾಜಸಕಾಲದಲ್ಲಿ ರಾಜಪೂಜ್ಯತೆ ಉಂಟಾಗುವುದೆಂದೂ, ತಾಮಸವೇಳೆಯಲ್ಲಿ ನಿಷ್ಫಲವೂ, ನಷ್ಟವೂ ಉಂಟಾಗುವುದೆಂದು ತಿಳಿಯುವುದು.

## ಪಂಚಕವು

➢ **ತಿಥಿಂ ವಾರಂ ಚ ನಕ್ಷತ್ರಂ ಲಗ್ನಂ ಚೈವ ವಿಮಿಶ್ರಿತಮ್ ||**
**ನವಭಿಸ್ತುಹರೇದ್ಭಾಗಂ ಶೇಷಂ ಪಂಚಮೀರಿತಮ್ ||143||**

**ತಾ ||** ಮಾಸಾದಿಯಾಗಿರಲಿ, ಪಕ್ಷಾದಿಯಾಗಿರಲಿ ಪಾಡ್ಯ ಮೊದಲು ತಿಥಿ ಸಂಖ್ಯೆಯನ್ನೂ, ಭಾನುವಾರಾದಿಯಾಗಿ ವಾರಸಂಖ್ಯೆಯನ್ನೂ ಅಶ್ವಿನ್ಯಾದಿಯಾಗಿ ನಕ್ಷತ್ರ ಸಂಖ್ಯೆಯನ್ನೂ, ಮೇಷಾದಿಯಾಗಿ ಲಗ್ನಸಂಖ್ಯೆಯನ್ನೂ ಒಟ್ಟು ಸೇರಿಸಿ 9 ರಿಂದ ಭಾಗಿಸಿದಲ್ಲಿ ಉಳಿದದ್ದೇ ಪಂಚಕವು.

➢ **ಏಕೋಮೃತ್ಯುರ್ದ್ವಯೋರ್ವಹ್ನಿಶ್ಚತಾರೋ ರಾಜಪಂಚಕಮ್ ||**
**ಷಟ್ಚೋರದುಷ್ಟರೋಗಶ್ಚ ಪಂಚೈತಾನಿ ವಿವರ್ಜಯೇತ್ ||144||**

**ತಾ ||** 1 ನಿಂತರೆ ಮೃತ್ಯುಪಂಚಕ, 2 ನಿಂತರೆ ಅಗ್ನಿಪಂಚಕ, 4 ನಿಂತರೆ ರಾಜಪಂಚಕ, 7 ನಿಂತರೆ ಚೋರಪಂಚಕ, 8 ನಿಂತರೆ ರೋಗಪಂಚಕವೆಂದು ತಿಳಿಯುವುದು. 3, 5,

7, 9 ಉಳಿದರೆ ನಿಷ್ಪಂಚಕವೆಂದೂ, 1, 2, 4, 6, 8 ಉಳಿದರೆ ಪಂಚಕ ಸರಿಯಿಲ್ಲವೆಂದೂ ತಿಳಿಯುವುದು.

➢ **ಚೋರಂ ರೋಗಂ ತ್ಯಜೇದ್ರಾತ್ರೌ ದಿವಾರಾಜಾಗ್ನಿಮೇವಚ ||**
**ಉಪನೀತಸ್ಯ ರೋಗಸ್ಯ ತ್ಯಜೇನ್ಮೃತ್ಯೋಶ್ಚ ಪಂಚಕಮ್ ||145||**

**ತಾ ||** ಚೋರಪಂಚಕವನ್ನು – ರೋಗಪಂಚಕವನ್ನು ರಾತ್ರಿಕಾಲದಲ್ಲಿ ಬಿಡಬೇಕೆಂದೂ, ಅಗ್ನಿಪಂಚಕವನ್ನು – ರಾಜಪಂಚಕವನ್ನು ಹಗಲಿನಲ್ಲಿ ಬಿಡಬೇಕೆಂದೂ, ಉಪನಯನ ಲಗ್ನಕ್ಕೆ ರೋಗಪಂಚಕವನ್ನು – ಮೃತ್ಯುಪಂಚಕವನ್ನು ಬಿಡಬೇಕೆಂದು ಪರ್ಯಾಯ ವಚನದಲ್ಲಿ ಹೇಳಿರುವುದು.

➢ **ರೋಗೋಪನಯನೇ ವರ್ಜ್ಯಂ ವಿವಾಹೇ ಮೃತ್ಯುಪಂಚಕಮ್ ||**
**ಯಾತ್ರಾಯಾಂ ಚೋರಕಂ ಚೈವ ಪ್ರವೇಶೇಗ್ನಿಂ ವಿವರ್ಜಯೇತ್ ||146||**

**ತಾ ||** ಉಪನಯನದಲ್ಲಿ ರೋಗಪಂಚಕ, ವಿವಾಹದಲ್ಲಿ ಮೃತ್ಯುಪಂಚಕ, ಪ್ರಯಾಣದಲ್ಲಿ ಚೋರಪಂಚಕವನ್ನು ಬಿಡಬೇಕೆಂದು ಪಕ್ಷಾಂತರದಲ್ಲಿ ಹೇಳಿರುವುದು.

## ಪಂಚತತ್ತ್ವಗಳು

➢ **ತಿಥಿಂ ವಾರಂ ಚ ನಕ್ಷತ್ರಂ ಲಗ್ನಂ ವಹ್ನಿಸಮನ್ವಿತಮ್ ||**
**ಪಂಚಭಿರ್ಹರತೇ ಭಾಗಂ ಪಂಚತತ್ತ್ವಾ ಭವಂತಿ ಚ ||147||**

**ತಾ ||** ತಿಥಿ, ವಾರ, ನಕ್ಷತ್ರ, ಲಗ್ನಗಳ ಸಮಷ್ಟಿಗೆ 3 ನ್ನು ಸೇರಿಸಿ 5 ರಿಂದ ಭಾಗಿಸಿದಲ್ಲಿ ಪಂಚತತ್ತ್ವಗಳಾಗುವುದು.

➢ **ಪೃಥಿವ್ಯಾಪಸ್ತಥಾ ತೇಜೋ ವಾಯುರಾಕಾಶಮೇವಚ |**
**ಪೃಥಿವೀ ಶತ್ರುನಾಶಃ ಸ್ಯಾದಪ್ಸುಕಾಮಿತಸಿದ್ಧಿದಮ್ ||**
**ತೇಜಶ್ಚ ರಾಜ್ಯದಂ ಪ್ರೋಕ್ತಂ ವಾಯುಃ ಕಾರ್ಯವಿನಾಶನಮ್ ||**
**ಆಕಾಶೇ ಮೃತ್ಯುಮಾಪ್ನೋತಿ ಪಂಚತತ್ತ್ವಫಲಂ ತ್ವಿದಮ್ || 148-149||**

**ತಾ ||** ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶವೆಂದು 5 ತತ್ತ್ವಗಳು. ನಿಂತ ಶೇಷ 1 ಉಳಿದರೆ ಪೃಥ್ವಿತತ್ತ್ವ – ಶತ್ರುನಾಶನ, 2 ಉಳಿದರೆ ಅಪ್‌ತತ್ತ್ವ – ಇಷ್ಟಾರ್ಥ ಸಿದ್ಧಿ,

3 ಉಳಿದರೆ ತೇಜಸ್ತತ್ತ್ವ - ರಾಜ್ಯಪ್ರಾಪ್ತಿ, 4 ಉಳಿದರೆ ವಾಯುತತ್ತ್ವ - ನಷ್ಟಪ್ರದ, 5 ಉಳಿದರೆ ಆಕಾಶತತ್ತ್ವ - ಮೃತ್ಯುಪ್ರದವೆಂದು ಪಂಚತತ್ತ್ವಗಳನ್ನು ತಿಳಿಯುವುದು.

## ಕ್ಷೌರಪ್ರಕರಣ ಶುಭತಿಥಿಗಳು

➢ **ದ್ವಿತೀಯಾಚ ತೃತೀಯಾಚ ಪಂಚಮೀ ಸಪ್ತಮೀ ತಥಾ ॥**
**ತ್ರಯೋದಶೀ ಚ ದಶಮೀ ಕ್ಷುರಕರ್ಮ ಶುಭಪ್ರದಾ ॥150॥**

ತಾ ॥ ಬಿದಿಗೆ, ತದಿಗೆ, ಪಂಚಮಿ, ತ್ರಯೋದಶಿ, ದಶಮೀ - ಈ ತಿಥಿಗಳು ಕ್ಷೌರಕರ್ಮಕ್ಕೆ ಉತ್ತಮ ದಿನಗಳು.

## ಅಶುಭ ತಿಥಿಗಳು

➢ **ಪ್ರತಿಪಚ್ಚ ಚತುರ್ಥೀ ಚ ಷಷ್ಟೀಚೈವ ತಥಾಷ್ಟಮೀ ।**
**ನವಮ್ಯೈಕಾದಶೀಚೈವ ದ್ವಾದಶೀ ಚ ಚತುರ್ದಶೀ ॥**
**ಪೂರ್ಣಿಮಾ ಚಾಪ್ಯಮಾವಾಸ್ಯಾ ವರ್ಜಯೇಚ್ಚ ಸದಾ ಬುಧೈಃ ॥151-152॥**

**ತಾ ॥** ಪಾಡ್ಯ, ಚತುರ್ಥಿ, ಷಷ್ಠಿ, ಅಷ್ಟಮಿ, ನವಮಿ, ಏಕಾದಶಿ, ದ್ವಾದಶಿ, ಚತುರ್ದಶಿ, ಪೂರ್ಣಿಮಾ, ಅಮಾವಾಸ್ಯೆ - ಈ ದಿವಸಗಳು ವಿದ್ವಾಂಸರುಗಳಿಂದ, ಜ್ಯೋತಿಷ್ಕರಿಂದ ನಿಂದಿತವಾಗಿರುವುದು.

## ಶುಭಾಶುಭ ವಾರಗಳು

➢ **ಚಂದ್ರಭಾರ್ಗವ ಸೌಮ್ಯೇಜ್ಯ ವಾರಾಶ್ಶುಭಕರಾಃ ಸ್ಮೃತಾಃ ॥**
**ಭಾನುಭೌಮಶನೀನಾಂ ತು ವಾರಾ ನಿಂದ್ಯಾಸ್ತಥೈವಚ ॥153॥**

**ತಾ ॥** ಸೋಮವಾರ, ಶುಕ್ರವಾರ, ಬುಧವಾರ, ಗುರುವಾರಗಳು ಉತ್ತಮ ದಿನಗಳು. ಮಂಗಳವಾರ, ಶನಿವಾರ, ಭಾನುವಾರಗಳು ನಿಂದ್ಯ ದಿನಗಳೆಂದು ತಿಳಿಯುವುದು.

## ಶುಭ ನಕ್ಷತ್ರಗಳು

➢ ಪುಷ್ಯ ಪುನರ್ವಸು ರೇವತಿ ಹಸ್ತಾಃ ಶ್ರವಣ ಧನಿಷ್ಠ ಮೃಗಾಶ್ವಿನಿ ಚಿತ್ತಾಃ ॥
ವಾಸವವಾರುಣವಾಯು ಸಮೇತಂ ದ್ವಾದಶ ಋಕ್ಷಂ ಕ್ಷೌರ ಪ್ರಶಸ್ತಮ್ ॥154॥

ತಾ ॥ ಪುಷ್ಯಮಿ, ಪುನರ್ವಸು, ರೇವತಿ, ಹಸ್ತ, ಶ್ರವಣ, ಧನಿಷ್ಠ, ಮೃಗಶಿರ, ಅಶ್ವಿನಿ, ಚಿತ್ತಾ, ಜ್ಯೇಷ್ಠ, ಸ್ವಾತಿ, ಶತಭಿಷ ಈ 12 ನಕ್ಷತ್ರಗಳು ಕ್ಷೌರಕರ್ಮಕ್ಕೆ ಪ್ರಶಸ್ತವೆಂದು ಉಕ್ತವಾಗಿರುವುದು.

## ವರ್ಜ್ಯ ನಕ್ಷತ್ರಗಳು

➢ ಭರಣೀ ಕೃತ್ತಿಕಾ ಚೈವ ರೋಹಿಣ್ಯಾದ್ರಾರ್ಹಿಭಂ ತಥಾ ।
ಮಖಾ ಪುಬ್ಬೋತ್ತರಾಶ್ಚೈವ ವಿಶಾಖಾ ಚಾನುರಾಧಿಕಾ ॥
ಪೂರ್ವಾಷಾಡೋತ್ತರಾಷಾಢಾ ಪೂರ್ವಾಭಾದ್ರಾ ಚ ಮೂಲಭಮ್ ॥
ತಥಾಚೋತ್ತರಾಭಾದ್ರಾ ಕ್ಷೌರೇ ವರ್ಜ್ಯಾ ಸದಾ ಬುಧೈಃ ॥155-156॥

ತಾ ॥ ಭರಣಿ, ಕೃತ್ತಿಕ, ರೋಹಿಣಿ, ಆದ್ರ್ರಾ, ಆಶ್ಲೇಷ, ಮಖ, ಪುಬ್ಬ, ಉತ್ತರ, ವಿಶಾಖ, ಅನೂರಾಧ, ಪೂರ್ವಾಷಾಢ, ಉತ್ತರಾಷಾಢ, ಪೂರ್ವಾಭಾದ್ರ, ಮೂಲ, ಉತ್ತರಾಭಾದ್ರ - ಈ ನಕ್ಷತ್ರಗಳು ಕ್ಷೌರಕರ್ಮಕ್ಕೆ ನಿಷಿದ್ಧ.

## ವರ್ಜ್ಯ ಕಾಲಗಳು

➢ ಸಂಧ್ಯಾಪರ್ವಸು ಸಂಕ್ರಾಂತೌ ರಾತ್ರೌ ಚ ಗ್ರಹಣೇ ತಥಾ ॥
ಭೋಜನಾನಂತರೇ ಚೈವ ವರ್ಜಯೇಚ್ಚ ಸದಾ ಬುಧೈಃ ॥157॥

ತಾ ॥ ಉಭಯ ಸಂಧ್ಯಾಕಾಲಗಳು, ಪರ್ವಕಾಲಗಳು, ರಾತ್ರಿಕಾಲ, ಗ್ರಹಣಕಾಲ, ಭೋಜನಾನಂತರ ಸಹ ಕ್ಷೌರಕರ್ಮಕ್ಕೆ ನಿಂದ್ಯವಾಗಿರುವುದು.

## ಪಾದಾಚ್ಛಾಯ ವಿಷಯ

➢ ಏಕಾದಶೀತಿ ನವತ್ರಿಂಶ ಚತುರ್ವಿಂಶತಿ ಷೋಡಶ ದ್ವಾದಶಂ
ದಶಮೇಕಂ ಚ ನವಾಷ್ಟಮುನಿಷಟ್ಕಯೋಃ ।
ಬಾಣವೇದಾಗ್ನಿ ನೇತ್ರಂ ಚ ಏಕಂಚೇನ್ಮಧ್ಯಕಾಲತಃ ॥ 158-159 ॥

ತಾ ॥ ಸೂರ್ಯೋದಯ ಮೊದಲು 15 ಘಳಿಗೆ ಅಂದರೆ 10 ಘಂಟೆ ಪರ್ಯಂತಕ್ಕೂ 81 ಪಾದಚ್ಛಾಯಿ ಆದರೆ 1 ಘಳಿಗೆಯೆಂತಲೂ, 76 ಆದರೆ 2 ಘಳಿಗೆ, 24 ಆದರೆ 3 ಘಳಿಗೆ, 17 ಆದರೆ 4 ಘಳಿಗೆ, 12 ಆದರೆ 5 ಘಳಿಗೆ, 10 ಆದರೆ 6 ಘಳಿಗೆ, 9 ಆದರೆ 7 ಘಳಿಗೆ, 8 ಆದರೆ 8 ಘಳಿಗೆ, 7 ಆದರೆ 9 ಘಳಿಗೆ, 6 ಆದರೆ 10 ಘಳಿಗೆ, 5 ಆದರೆ 11 ಘಳಿಗೆ, 4 ಆದರೆ 12 ಘಳಿಗೆ, 3 ಆದರೆ 13 ಘಳಿಗೆ, 2 ಆದರೆ 14 ಘಳಿಗೆ, 1 ಆದರೆ 15 ಘಳಿಗೆಯೆಂದು – ಈ ಪ್ರಕಾರ ಮಧ್ಯಾಹ್ನಾನಂತರ ವಿಲೋಮವಾಗಿ ಛಾಯೆಯಿಂದ ಘಳಿಗೆಗಳನ್ನು ನಿಷ್ಕರ್ಷಿಸಿಕೊಳ್ಳುವುದು.

## ಪುಷ್ಕರಾಂಶ ವಿಷಯ

➢ ಏಕವಿಂಶೋ ಮನುಶ್ಚೈವ ಜಿನಾಶ್ಚ ಮುನಯಃ ಕ್ರಮಾತ್ ॥
**ಮೇಷಾದಿ ಮೀನಪರ್ಯಂತಂ ಪುಷ್ಕರಾಂಶಾಃ ಪ್ರಕೀರ್ತಿತಾಃ ॥160॥**

ತಾ ॥ ಮೇಷದಲ್ಲಿ 21ನೇ ಭಾಗ, ವೃಷಭದಲ್ಲಿ 14ನೇ ಭಾಗ, ಮಿಥುನದಲ್ಲಿ 24ನೇ ಭಾಗ, ಕರ್ಕಾಟಕದಲ್ಲಿ 7ನೇ ಭಾಗ – ಈ ಪ್ರಕಾರ ಮೀನಪರ್ಯಂತರ ಪುಷ್ಕರ ಅಂಶಗಳನ್ನು ನೋಡತಕ್ಕದ್ದು. ಭಾಗವೆಂದರೆ ಲಗ್ನವನ್ನು 30 ಭಾಗವಾಗಿ ಮಾಡಿಕೊಳ್ಳ ತಕ್ಕದ್ದು.

## ಸುಭಿಕ್ಷ ದುರ್ಭಿಕ್ಷ ವಿಷಯ

➢ ಪ್ರಭವಾರಭ್ಯಗಣನಂ ತತ್ಸಂಖ್ಯಾದ್ವಿಗುಣೀಕೃತೇ ॥
ತ್ರಿಭಿಸ್ವಂ ಯುಕ್ತಕಂ ಚೈವ ಸಪ್ತಭಿರ್ಭಾಗಮಾಹರೇತ್ ॥ 161 ॥

➢ ಏಕತ್ರಯಂಚ ದುರ್ಭಿಕ್ಷಂ ದ್ವಿಪಂಚತ್ವಸುಭಿಕ್ಷಕೃತ್ ।
ಚತುಷ್ಷಷ್ಟೇಸಮಂ ಚೈವ ಶೂನ್ಯೇ ಶೂನ್ಯಫಲಂ ಭವೇತ್ ॥ 162 ॥

ತಾ ॥ ಸುಭಿಕ್ಷ, ದುರ್ಭಿಕ್ಷಗಳನ್ನು ತಿಳಿಯಬೇಕಾದರೆ, ಪ್ರಭವ ಸಂವತ್ಸರಕ್ಕೆ ಮೊದಲು ನೋಡಬೇಕಾದ ವರ್ಷದವರೆಗೆ ಎಣಿಸಿ 2 ರಿಂದ ಗುಣಿಸಿ, 3ನ್ನು ಸೇರಿಸಿ, 7 ರಿಂದ ಭಾಗಿಸಿದ ಲಬ್ಧಕ್ಕೆ 1, 3 ಉಳಿದರೆ ದುರ್ಭಿಕ್ಷ, 2, 5 ಉಳಿದರೆ ಸುಭಿಕ್ಷ, 4, 6 ನಿಂತರೆ ಸಮ, ಶೂಣ್ಯವಾದರೆ ಆ ವರ್ಷವೆಲ್ಲವೂ ಶೂನ್ಯವೆಂದು ತಿಳಿಯುವುದು.

## ಗರ್ಭಿಣೀ ಪ್ರಸವ ಕಾಲಜ್ಞಾನ

➤ ನಖಧ್ರುವಂ ಗರ್ಭಿಣೀ ನಾಮಧೇಯ ತಿಥಿ ಪ್ರಯುಕ್ತಂ ಶರಸಂಯುತಂ ಚ ವಾರಾದಿಯುಕ್ತಂ ನವಭಾಗಶೇಷ ಸಮೇ ಕುಮಾರಿ ವಿಷಮೇ ಕುಮಾರಃ ॥163॥

ತಾ ॥ ಗರ್ಭಿಣಿಸ್ತ್ರೀಯರಿಗೆ 9 ತಿಂಗಳು ತುಂಬಿದ ಕಾಲದಲ್ಲಿ ಗಂಡುಮಗು ವಾಗುತ್ತದೆಯೇ? ಹೆಣ್ಣುಮಗುವಾಗುತ್ತದೆಯೇ? ಎಂದು ಪ್ರಶ್ನೆ ಮಾಡಿದಾಗ್ಗೆ 20ನ್ನು ಧ್ರುವಕವಾಗಿ ಇಟ್ಟುಕೊಂಡು ಗರ್ಭಿಣಿ ಸ್ತ್ರೀಯ ನಾಮಾಕ್ಷರ ಸಂಖ್ಯೆಯನ್ನೂ, ಆ ದಿವಸದ ತಿಥಿಸಂಖ್ಯೆಯನ್ನೂ, 5ನ್ನೂ, ಆ ದಿನದ ವಾರಸಂಖ್ಯೆಯನ್ನೂ ಒಟ್ಟು ಸೇರಿಸಿ 9 ರಿಂದ ಭಾಗಿಸಿದಲ್ಲಿ ನಿಂತದ್ದು 2, 4, 6, 8 ಆದಲ್ಲಿ ಹೆಣ್ಣುಮಗುವೆಂದೂ, 1, 3, 5, 7, 9 ಆದಲ್ಲಿ ಗಂಡುಮಗುವೆಂದೂ ಹೇಳಬೇಕು.

## ಗ್ರಾಮಸಾಲಾವಳಿ ವಿಷಯ

➤ ಗ್ರಾಮನಕ್ಷತ್ರಮಾರಭ್ಯ ನಾಮನಕ್ಷತ್ರಗಣ್ಯತೇ ಶಿರಃ ಪಂಚಾರ್ಥ ಲಾಭಂ ಚ ಮಖೇ ತ್ರೀಣ್ಯಾರ್ಥನಾಶನಮ್ ॥ ಬಾಣಹೃತ್ಸು ಧನಂ ಧಾನ್ಯಂ ದ್ವೌಪದೌಷದ್ದರಿದ್ರತಾ । ಪೃಷ್ಠೈಕಂ ಪ್ರಾಣಸಂದೇಹಂ ನಾಭೌ ಚತ್ವಾರಿ ಸಂಪದಃ ॥ ದ್ವೌಗುಹ್ಯೇಚ ಭಯಂ ಪೀಡಾ ದಶಹಸ್ತೇ ಕಲಾ ಭವೇತ್ ॥ ವಾಮಹಸ್ತೇ ಚ ದಾರಿದ್ರ್ಯಂ ಗ್ರಾಮಚಕ್ರಸ್ಯ ಲಕ್ಷಣಮ್ ॥ 164, 165, 166 ॥

ತಾ ॥ ಒಂದು ನರಾಕಾರವನ್ನು ಬರೆದು ಗ್ರಾಮನಕ್ಷತ್ರಾದಿಯಾಗಿ 5 ನಕ್ಷತ್ರಗಳನ್ನು ಶಿರಸ್ಸಿನಲ್ಲಿಯೂ, 3 ನಕ್ಷತ್ರಗಳನ್ನು ಮುಖದಲ್ಲಿಯೂ, 5 ನಕ್ಷತ್ರಗಳನ್ನು ಹೃದಯದಲ್ಲಿಯೂ, 6 ನಕ್ಷತ್ರಗಳನ್ನು ಪಾದ್ವಯದಲ್ಲಿಯೂ, 2 ನಕ್ಷತ್ರಗಳನ್ನು ಪೃಷ್ಟಭಾಗದಲ್ಲಿಯೂ, 4 ನಕ್ಷತ್ರಗಳನ್ನು ನಾಭಿಸ್ಥಾನದಲ್ಲಿಯೂ, 1 ನಕ್ಷತ್ರವನ್ನು ದಕ್ಷಿಣಹಸ್ತದಲ್ಲಿಯೂ, 1 ನಕ್ಷತ್ರವನ್ನು ವಾಮಹಸ್ತದಲ್ಲಿಯೂ – ಈ ಪ್ರಕಾರ 27 ನಕ್ಷತ್ರಗಳನ್ನು ಬರೆದು ತನ್ನ ಜನ್ಮನಕ್ಷತ್ರವು ಶಿರಸ್ಸಿನಲ್ಲಿರಲು ಧನಲಾಭ, ಮುಖಭಾಗದಲ್ಲಿರಲು ಧನನಾಶ, ಹೃದಯದಲ್ಲಿರಲು ಧನಧಾನ್ಯಲಾಭ, ಪಾದದ್ವಯದಲ್ಲಿರಲು ದರಿದ್ರತ್ವ, ಪೃಷ್ಟಭಾಗದಲ್ಲಿರಲು ಮೃತ್ಯು, ನಾಭಿಯಲ್ಲಿರಲು ಐಶ್ವರ್ಯ, ಗುಹ್ಯದಲ್ಲಿರಲು ಧನಲಾಭ, ಸವ್ಯಹಸ್ತದಲ್ಲಿರಲು ವ್ಯಾಪಾರಲಾಭ, ವಾಮಹಸ್ತದಲ್ಲಿರಲು ದಾರಿದ್ರ್ಯವೆಂದು ನಿಶ್ಚಯವಾಗಿದೆ.

## ರಜಸ್ವಲಾ ಪ್ರಕರಣ

➢ **ಪ್ರತಿಪತ್ಪುತ್ರಹೀನಾಚ ದ್ವಿತೀಯಾಲ್ಪಸುಖಂ ಲಭೇತ್ ॥**
**ತೃತೀಯಾಯಾಂ ಭಾಗ್ಯವತೀ ಚತುರ್ಥ್ಯಾಂ ಪಾಪಚಾರಿಣೀ ॥**
**ಪಂಚಮ್ಯಾಂ ಸುಖಪುತ್ರಾಚ ಷಷ್ಠ್ಯಾಂ ದುರ್ಭಾಷಿಣೀ ಭವೇತ್ ।**
**ಸಪ್ತಮ್ಯಾಂ ಧನಯುಕ್ತಾ ಚ ಅಷ್ಟಮ್ಯಾಂ ಶೌರ್ಯಸಂಯುತಾ ॥**
**ನವಮ್ಯಾಂ ದುಃಖಿತಾಚೈವ ದಶಮ್ಯಾಂ ಭಾಗ್ಯಸಂಯುತಾ ॥**
**ಏಕಾದಶ್ಯಾಂ ಶುಚಿತ್ವಂ ಚ ದ್ವಾದಶ್ಯಾಂ ಪರದೂಷಿಣೀ**
**ತ್ರಯೋದಶ್ಯಾಂತು ಸಂತುಷ್ಟಾ ಚತುರ್ದಶ್ಯಾಂತು ಪಾಪಿನೀ ॥**
**ಪೂರ್ಣಿಮಾಯಾಂ ದುಃಖಿತಾಚ ಅಮಾಯಾಮಲ್ಪಭೋಗಿನೀ ॥**
**ಏವಂ ತಿಥಿಫಲಂ ಪ್ರೋಕ್ತಂ ಸ್ತ್ರೀಣಾಂಚ ಪ್ರಥಮಾರ್ತವೇ ॥ 167॥**

ತಾ ॥ ಕನ್ಯೆಯು ಪಾಡ್ಯದಲ್ಲಿ ಪ್ರಥಮ ರಜಸ್ವಲೆಯಾದರೆ ಪುತ್ರಹೀನತ್ವ, ಬಿದಿಗೆಯಲ್ಲಿ ಅಲ್ಪಸುಖ, ತದಿಗೆಯಲ್ಲಿ ಭಾಗ್ಯವತಿ, ಚತುರ್ಥಿಯಲ್ಲಿ ಪಾಪಚರಣತ್ವ, ಪಂಚಮಿಯಲ್ಲಿ ಸುಖ ಹಾಗೂ ಸುಪುತ್ರತ್ವ, ಷಷ್ಠಿಯಲ್ಲಿ ದುರ್ಭಾಷಣತ್ವ, ಸಪ್ತಮಿಯಲ್ಲಿ ಧನವೃದ್ಧಿ, ಅಷ್ಟಮಿಯಲ್ಲಿ ಶೌರ್ಯ, ನವಮಿಯಲ್ಲಿ ದುಃಖ, ದಶಮಿಯಲ್ಲಿ ಭಾಗ್ಯ, ಏಕಾದಶಿ ಯಲ್ಲಿ ಶುಚಿತ್ವ, ದ್ವಾದಶಿಯಲ್ಲಿ ಪರದೂಷಣೆ, ತ್ರಯೋದಶಿಯಲ್ಲಿ ಸಂತುಷ್ಟತೆ, ಚತುರ್ದಶಿಯಲ್ಲಿ ಪಾಪತ್ವ, ಪೌರ್ಣಮಿಯಲ್ಲಿ ದುಃಖ, ಅಮಾವಾಸ್ಯೆಯಲ್ಲಿ ಅಲ್ಪಭೋಗವು ಎಂಬುದಾಗಿ ಪ್ರಥಮ ರಜಸ್ವಲೆಯಾದ ಕನ್ಯೆಯ ಫಲಗಳನ್ನು ತಿಳಿಯುವುದು.

## ವಾರಫಲ

➢ **ರೋಗಿಣೀ ರವಿವಾರೇ ಚ ಸೋಮವಾರೇ ಪತಿವ್ರತಾ ॥**
**ದುಃಖಿತಾ ಭೌಮವಾರೇಚ ಬುಧೇ ಸೌಭಾಗ್ಯಸಂಯುತಾ ॥**
**ಸಂಪದ್ಯುಕ್ತಾ ಗುರೋರ್ವಾರೇ ಪತಿಭಕ್ತಿಃ ಭೃಗೋರ್ದಿನೇ ॥**
**ಅನಪತ್ಯಾ ಮಂದವಾರೇ ಋತುವಾರ ಫಲಂ ಭವೇತ್ ॥ 168 ॥**

ತಾ ॥ ಕನ್ಯೆಯು ಭಾನುವಾರ ಪ್ರಥಮ ರಜಸ್ವಲೆಯಾದರೆ ರೋಗ, ಸೋಮವಾರ ಪತಿವ್ರತೆ, ಮಂಗಳವಾರ ದುಃಖ, ಬುಧವಾರ ಸೌಭಾಗ್ಯ, ಗುರುವಾರ ಸಂಪತ್ತು, ಶುಕ್ರವಾರ ಪತಿಭಕ್ತಿ, ಶನಿವಾರ ಅಪುತ್ರತ್ವ ಎಂಬುದಾಗಿ ವಾರಫಲವನ್ನು ತಿಳಿಯಬೇಕು.

## ಶುಭ ನಕ್ಷತ್ರಗಳು

➢ ಕರಾದಿಂಚೋತ್ತರಮೂಲಪೂಷಾ ವಿಷ್ಣುತ್ರಯಾಶ್ವೀಜ್ಯವಿಧೀಂದು ಭೇಷು ॥
ಆದ್ಯಂ ರಜಃ ಸೌಖ್ಯಸುತಾಯುರರ್ಥಂ ಸೌಭಾಗ್ಯವೃದ್ಧಿಂ ಕುರುತೇऽಂಗನಾನಾಂ॥169॥

ತಾ ॥ ಕನ್ಯೆಯು ಹಸ್ತ, ಚಿತ್ತ, ಸ್ವಾತಿ, ವಿಶಾಖ, ಅನೂರಾಧ, ಮೂಲ, ಪೂರ್ವಾಷಾಢ, ಶ್ರವಣ, ಧನಿಷ್ಠ, ಶತಭಿಷ, ಅಶ್ವಿನಿ, ಪುಷ್ಯ, ರೋಹಿಣಿ, ಮೃಗಶಿರ – ಈ ನಕ್ಷತ್ರಗಳಲ್ಲಿ ಪ್ರಥಮ ರಜಸ್ವಲೆಯಾದರೆ ಸೌಖ್ಯ, ಪುತ್ರವೃದ್ಧಿ, ಸೌಭಾಗ್ಯ, ಆಯುಸ್ಸು ಇತ್ಯಾದಿ ಉತ್ತಮ ಫಲಗಳನ್ನು ಪಡೆಯುವಳು.

## ದುಷ್ಟ ನಕ್ಷತ್ರಗಳು

➢ ಪೂರ್ವತ್ರಯೇ ಯಾಮ್ಯೇ ಭುಜಂಗದಿಷ್ಣೇ ।
ತಾಂಬೂಲ ತೈಲ ಕುಸುಮಂ ಚ ಸುಮಂ ಹರಿದ್ರಾಂ ॥
ಸ್ವಭರ್ತೃಸಂದರ್ಶನಮೇವ ವರ್ಜ್ಯಂ
ತಾತ್ಕಾಲಿಕಂ ಶಾಂತಿವಿಧಿಂ ಪ್ರಕುರ್ಯಾತ್ ॥ 170॥

ತಾ ॥ ಕನ್ಯೆಯು ಪ್ರಥಮ ರಜಸ್ವಲೆಯಾದದ್ದು ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ, ಭರಣಿ, ಆಶ್ಲೇಷ ಈ ನಕ್ಷತ್ರಗಳಾದರೆ ಅಭ್ಯಂಜನ, ಪುಷ್ಪ, ಅರಿಶಿನ, ಪತಿದರ್ಶನ ಮುಂತಾದವುಗಳನ್ನು ಮಾಡದೆ ಉಕ್ತವಾದ ಶಾಂತಿಯನ್ನು ಮಾಡಿ ಪರಿಗ್ರಹಿಸಬೇಕೆಂದು ತಿಳಿಯುವುದು.

➢ ಪ್ರಥಮಾರ್ತೇ ಭವೇನ್ನಾರೀ ಮಖಾರಿದ್ರೇ ನ ದುಃಖಿತಾಃ ॥
ದಿತೀಂದ್ರೇ ಚ ದರಿದ್ರಸ್ಯಾ ಧನಲೇನತು ಬಂಧಕೀ ॥ 171 ॥

ತಾ ॥ ಕನ್ಯೆಯು ಪ್ರಥಮ ರಜಸ್ವಲೆಯಾದ್ದು ಆದ್ರಾ, ಮೂಲಾ ನಕ್ಷತ್ರಗಳಾದರೆ ದುಃಖಿ, ಪುನರ್ವಸು, ಜ್ಯೇಷ್ಠಗಳಾದರೆ ವ್ಯಭಿಚಾರಿತ್ವ, ಕೃತ್ತಿಕೆ ಆದರೆ ದರಿದ್ರತ್ವ ಎಂದು ತಿಳಿಯುವುದು.

## ದುಷ್ಟ ನಕ್ಷತ್ರ ಪಾದ ಫಲಗಳು

➢ ಪೂರ್ವತ್ರಯೇ ಭುಜಂಗರ್ಕ್ಷೇ ಯಾಮ್ಯೇ ಚೈವ ರಜಸ್ವಲಾ ॥
ಪ್ರಥಮಾಂಶೇ ಪತಿಘ್ನೀಸ್ಯುಃ ದ್ವಿತೀಯೇ ಮೃತಪುತ್ರತಾ ॥
ತೃತೀಯೇ ತು ದರಿದ್ರಸ್ಯಾಂ ಚತುರ್ಥೇ ಮಂಗಳಪ್ರದಾ ॥ 172-173 ॥

ತಾ || ಕನ್ಯೆಯು ಪ್ರಥಮ ರಜಸ್ವಲೆಯಾದದ್ದು ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ, ಭರಣಿ - ಈ ನಕ್ಷತ್ರಗಳಲ್ಲಿ ಒಂದನೇ ಪಾದವಾದರೆ ಪತಿವಿಯೋಗ, ಎರಡನೇ ಪಾದವಾದರೆ ಪುತ್ರನಾಶ, ಮೂರನೇ ಪಾದವಾದರೆ ದರಿದ್ರತ್ವ, ನಾಲ್ಕನೇ ಪಾದವಾದರೆ ಸುಖ, ದೀರ್ಘಸೌಮಂಗಲ್ಯವೂ ಉಂಟಾಗುವುದೆಂದು ತಿಳಿಯುವುದು.

➤ **ಗ್ರಹಣೇ ಚೈವ ಸಂಕ್ರಾಂತೌ ಮಧ್ಯಾಹ್ನಂ ಚ ತಥಾ ನಿಶಿ |**
**ಪರಿಘಸ್ಯೇ ಚ ಪೂರ್ವಾರ್ಧೇ ವ್ಯತೀಪಾತಂ ಚ ವೈಧೃತೌ ||**
**ಸಂಧ್ಯಾಸೂಪಪ್ಲವೇನಿಷ್ಟಾ ಅಶುಭಂ ಪ್ರಥಮಾರ್ತವಮ್ || 174 ||**

ತಾ || ಸೂರ್ಯಚಂದ್ರರ ಗ್ರಹಣಕಾಲಗಳಲ್ಲಿಯೂ, ಮೇಷಾದಿ 12 ಸಂಕ್ರಮಣ ಕಾಲಗಳಲ್ಲಿಯೂ, ಮಧ್ಯಾಹ್ನಕಾಲದಲ್ಲಿಯೂ, ರಾತ್ರಿಕಾಲದಲ್ಲಿಯೂ, ಪ್ರಾತಃಕಾಲ ದಲ್ಲಿಯೂ, ಸಾಯಂಕಾಲದಲ್ಲಿಯೂ, ಅಶನಿಪಾತ ಮೊದಲಾದವುಗಳ ಕಾಲದಲ್ಲಿ ಭದ್ರಕರಣದಲ್ಲಿಯೂ, ಪರಿಘಯೋಗಪೂರ್ವದಲ್ಲಿಯೂ, ವ್ಯತೀಪಾತವೈಧೃತಿ ಗಳಲ್ಲಿಯೂ, ವಿಷ್ಟಿಕಾಲದಲ್ಲಿಯೂ ಪ್ರಥಮ ರಜಸ್ವಲೆಯಾದಲ್ಲಿ ದೋಷವೆಂದು ತಿಳಿಯುವುದು.

## ಲಗ್ನಫಲ

➤ **ಮೇಷ ವ್ಯಭಿಚಾರೀ ಚ ವೃಷೇ ಸೌಖ್ಯವಿವರ್ಧಿನೀ ||**
**ಮಿಥುನೇಸ್ಯಾತ್ಪುತ್ರವತೀ ಕರ್ಕಟೇ ಕುಟಿಲಾ ಭವೇತ್ || 175 ||**

**ಸಿಂಹೇ ಪುತ್ರವತೀನಾರೀ ಕನ್ಯಾಯಾಂ ಶ್ರೀಮತೀ ಭವೇತ್ ||**
**ತುಲಾಯಾಂ ಭಾಗ್ಯಸಂಯುಕ್ತಾ ವೃಶ್ಚಿಕೇ ವ್ಯಭಿಚಾರಿಣೀ || 176 ||**

**ಧನುಃಪೂರ್ವೇ ದುಶ್ಚರಿತ್ರಾಹ್ಯಪರೇತು ಪತಿವ್ರತಾ ||**
**ಮಕರೇ ಮಾನಹೀನಾಚ ಕುಂಭೇ ಧನವತೀ ಭವೇತ್ ||**
**ಮೀನೇ ಪುತ್ರವತೀಚೈವ ಪ್ರಥಮಾರ್ಥವಜಂ ಫಲಮ್ || 177-178 ||**

ತಾ || ಕನ್ಯೆಯು ಪ್ರಥಮ ರಜಸ್ವಲೆ ಮೇಷದಲ್ಲಾದರೆ ವ್ಯಭಿಚಾರ, ವೃಷಭದಲ್ಲಿ ಸೌಖ್ಯ, ಮಿಥುನದಲ್ಲಿ ಪುತ್ರತ್ವ, ಕರ್ಕಾಟಕದಲ್ಲಿ ಕುಟಿಲತ್ವ, ಸಿಂಹದಲ್ಲಿ ಪುತ್ರತ್ವ, ಕನ್ಯೆಯಲ್ಲಿ ಶ್ರೀಮಂತತ್ವ, ತುಲಾದಲ್ಲಿ ಭಾಗ್ಯ, ವೃಶ್ಚಿಕದಲ್ಲಿ ವ್ಯಭಿಚಾರತ್ವ, ಧನುಸ್ಸಿನ ಪೂರ್ವಾರ್ಧ ದಲ್ಲಿ ದುಶ್ಚರಿತ್ರ, ಧನುಸ್ಸಿನ ಉತ್ತರಾರ್ಧದಲ್ಲಿ ಪಾತಿವ್ರತತ್ವ, ಮಕರದಲ್ಲಿ ಮಾನಹೀನತ್ವ, ಕುಂಭದಲ್ಲಿ ಧನಸಮೃದ್ಧಿ, ಮೀನದಲ್ಲಿ ಪುತ್ರತ್ವ ಎಂಬುದಾಗಿ ಲಗ್ನಗಳನ್ನು ತಿಳಿದು ಫಲವನ್ನು ತಿಳಿಯುವುದು.

## ವಸ್ತ್ರಫಲ

➢ ಸುಭಗಾ ಶ್ವೇತವಸ್ತ್ರಾಸ್ಯಾದ್ ದೃಢವಸ್ತ್ರಾ ಪತಿವ್ರತಾ ॥
ಕ್ಷೌಮವಸ್ತ್ರಾಕ್ಷಿತೀಶಾಸ್ಯಾನ್ನವವಸ್ತ್ರಾ ಶುಭಾನ್ವಿತಾ ॥
ದುರ್ಭಗಾ ಜೀರ್ಣವಸ್ತ್ರಾಸ್ಯಾದ್ರೋಗಿಣೀ ರಕ್ತವಸ್ತ್ರಕಾ ॥
ನೀಲಾಂಬರಧರಾನಾರೀ ವಿಧವಾ ಪುಷ್ಪಿಣೀ ಭವೇತ್ ।
ಮಲಿನಾಂಬರಸಂಯುಕ್ತಾ ದರಿದ್ರಾಸ್ಯಾದ್ರಜಸ್ವಲಾ ॥ 179-180 ॥

ತಾ ॥ ಪ್ರಥಮ ರಜಸ್ವಲೆಯಾದ ಕನ್ಯೆಯು ಬಿಳೀ ಸೀರೆ ಉಟ್ಟಿದ್ದಲ್ಲಿ ಸೌಭಾಗ್ಯ, ದೃಢವಾದ ಸೀರೆ ಉಟ್ಟಿದ್ದಲ್ಲಿ ಪತಿವ್ರತೆ, ರೇಷ್ಮೆಸೀರೆ ಉಟ್ಟಿದ್ದಲ್ಲಿ ರಾಜಭೋಗ, ಹೊಸ ಸೀರೆ ಉಟ್ಟಿದ್ದಲ್ಲಿ ಮಂಗಳಕರ, ಹಳೆಯ ಸೀರೆ ಉಟ್ಟಿದ್ದಲ್ಲಿ ದೌರ್ಭಾಗ್ಯ, ಕೆಂಪು ಸೀರೆ ಉಟ್ಟಿದ್ದಲ್ಲಿ ರೋಗ, ಕಪ್ಪುಸೀರೆ ಉಟ್ಟಿದ್ದಲ್ಲಿ ವೈಧವ್ಯ, ಮಲಿನ ಸೀರೆ ಉಟ್ಟಿದ್ದಲ್ಲಿ ದಾರಿದ್ರ್ಯ ಎಂಬುದಾಗಿ ಆ ಕಾಲದಲ್ಲಿ ಉಟ್ಟಿರತಕ್ಕ ವಸ್ತ್ರಗಳಿಂದ ಫಲವನ್ನು ತಿಳಿಯುವುದು.

## ಬಿಂದುಫಲ

➢ ಪ್ರಾಪ್ನೋತಿ ಬಿಂದುನೈಕೇನ ಸೌಭಾಗ್ಯಂಚ ದ್ವಿಬಿಂದುನಾ ॥
ಭೋಗಸ್ತ್ರಿಸ್ತ್ರ ಬಿಂದುನಾ ರೋಗಂ ದಾರಿದ್ರ್ಯಂ ಬಹುಬಿಂದುನಾ ॥ 181 ॥

ತಾ ॥ ಪ್ರಥಮ ರಜಸ್ವಲೆಯಾದ ಕನ್ಯೆಗೆ ರಜೋದರ್ಶನ ಕಾಲದಲ್ಲಿ ಒಂದು ಬಿಂದುವಾದರೆ ಸೌಭಾಗ್ಯ, ಎರಡು ಬಿಂದುಗಳಾದರೆ ಸೌಖ್ಯ, ಮೂರು ಬಿಂದುಗಳಾದರೆ ರೋಗ, ಬಹುಬಿಂದುಗಳಾದರೆ ದರಿದ್ರ ಉಂಟಾಗುವುದು.

## ನಕ್ಷತ್ರ ದೋಷಕಾಲ ನಿರ್ಣಯ

➢ ಭರಣ್ಯಾ ದಶಮಾಸಾಶ್ಚ ಪೂರ್ವಾಷಾಢಾಷ್ಟಕಂ ತಥಾ ॥
ಮಖಾಯಾಂ ಸಂವತ್ಸರಂ ಪ್ರೋಕ್ತಂ ಷಣ್ಮಾಸಂ ರೌದ್ರಕೇ ತಥಾ ॥
ಜ್ಯೇಷ್ಠಾಹಿ ಕೃತ್ತಿಕಾಮಾಸಾ ಚತ್ವಾರೋ ವರ್ಜಯೇದ್ಬುಧಃ ॥
ಪಂಚಫಲ್ಗುನ್ಗಿಕಾಪ್ರೋಷ್ಟಾ ವರ್ಜಯೇದ್ಭರ್ತೃ ದರ್ಶನಂ ॥ 182-183 ॥

ತಾ ॥ ಕನ್ಯೆಯು ಪ್ರಥಮ ರಜಸ್ವಲೆ ಭರಣಿ ನಕ್ಷತ್ರದಲ್ಲಾದರೆ 10 ತಿಂಗಳು, ಪೂರ್ವಾಷಾಢ ನಕ್ಷತ್ರದಲ್ಲಾದರೆ 8 ತಿಂಗಳು, ಮಖಾ ನಕ್ಷತ್ರದಲ್ಲಾದರೆ 1 ವರ್ಷವು,

ಆದ್ರಾ ನಕ್ಷತ್ರದಲ್ಲಾದರೆ 6 ತಿಂಗಳು, ಜ್ಯೇಷ್ಠ ,ಆಶ್ಲೇಷಾ, ಕೃತ್ತಿಕಾ ನಕ್ಷತ್ರದಲ್ಲಾದರೆ 4 ತಿಂಗಳು, ಪುಬ್ಬಾ, ಪೂರ್ವಾಭಾದ್ರ ನಕ್ಷತ್ರಗಳಲ್ಲಾದರೆ 5 ತಿಂಗಳು ಬಿಟ್ಟು ಶಾಂತ್ಯಾದಿ ಕಾರ್ಯಗಳನ್ನು ಜರುಗಿಸಿ ಗರ್ಭಾದಾನವನ್ನು ಮಾಡುವುದು ಶ್ರೇಯಸ್ಕರ.

## ಶುಭ ಶಕುನಗಳು

➢ ಕನ್ಯಾಭೌರ್ಭೇರಿಶಂಖಂ ದಧಿಫಲಕುಸುಮಂ ಪಾವಕಂ ದೀಪ್ಯಮಾನಂ ॥
ಯಾನಂ ವಾ ವಿಪ್ರಯುಗ್ಮಂ ಹಯಗಜವೃಷಭಾನ್ ಪೂರ್ಣಕುಂಭದ್ವಯಂ ಚ॥
ಪೂರ್ಣಂ ಮಧ್ಯೇನ ಕುಂಭಂ ಜಲಚರಯುಗಳಂ ಸಿದ್ಧಮನ್ನಂ ಶವಂ ವಾ ॥
ವೇಶ್ಯಾಸ್ತ್ರೀ ಮಾಂಸಖಂಡಂ ಪ್ರಿಯಹಿತವಚನಂ ಮಂಗಳಂ ಪ್ರಸ್ಥಿತಾನಾಮ್ ॥ 184 ॥

ತಾ ॥ ಕನ್ಯೆಯರು, ಆಕಳು, ಭೇರಿ, ಶಂಖ, ಮೊಸರುಗಡಿಗೆ, ಹಣ್ಣುಗಳು, ಹೂವು, ಉರಿಯುವ ಬೆಂಕಿ, ರಥ, ಬ್ರಾಹ್ಮಣಯುಗ್ಮ, ಕುದುರೆ, ಆನೆ, ಎತ್ತು, ನೀರು ತುಂಬಿದ ಕುಂಭಗಳು, ಹೆಂಡದಗಡಿಗೆ, ಮೀನುಗಳು, ಅನ್ನ, ಶವ, ವೇಶ್ಯಾಸ್ತ್ರೀ, ಮಾಂಸ, ಶುಭವಾರ್ತೆ ಇತ್ಯಾದಿಗಳು ಪ್ರಯಾಣಕಾಲದಲ್ಲಿ ಶುಭವನ್ನು ಉಂಟುಮಾಡುವುದು. ಇದರಿಂದ ಕಾರ್ಯಸಿದ್ಧಿಯಾಗುವುದು.

## ಅಶುಭ ಶಕುನಗಳು

➢ ತಕ್ರಂ ತೈಲಾಭಿಷಿಕ್ತಂ ಮನುಜಮಘಮುಖೀಂ ವಾನರಂ ಕಾಷ್ಠಭಾರಂ ।
ರಿಕ್ತಸ್ತ್ರೀ ರಿಕ್ತಕುಂಭಂ ಪ್ರತಿಮುಖ ಕಲಹಂ ಮುಕ್ತಕೇಶೀಂ ಚ ನಗ್ನಮ್ ॥
ಕಾರ್ಪಾಸಂ ಛಿನ್ನನಾಸಂ ಸಜಟಮಕುಟಾರಕ್ತಮಾಲ್ಯಾದ್ರವಸ್ತ್ರಂ ॥
ಪ್ರಸ್ಥಾನೇ ಪ್ರಸ್ಥಿತಾನಾಂ ಅಶುಭಫಲಕರಂ ಬ್ರಹ್ಮಚಾರ್ಯೇಕವಿಪ್ರಮ್ ।
ಮಾರ್ಜಾಲಯುದ್ಧಂ ಕಲಹಂ ಕುಟುಂಬ ರಜಸ್ವಲಾಸ್ತ್ರೀ ಶತ ಕಾಷ್ಠಭಾರಂ ॥
ಅಕಾಲ ವೃಷ್ಟಿಶ್ಚ ಭುಜಂಗದರ್ಶನಂ ಷುಕ್ಷುಂ ದುಃಖಕರಂ ಪ್ರಯಾತುಃ ॥ 185–186॥

ತಾ ॥ ಮಜ್ಜಿಗೆ, ಎಣ್ಣೆ ಹೊತ್ತುಕೊಂಡಿರುವ ಮನುಷ್ಯ, ವಿಧವೆ, ಬರಿಯ ಕುಂಭ, ಜಗಳವಾಡುತ್ತಿರುವ ದಂಪತಿಗಳು, ಕಪಿಗಳು, ಸೌದೆಹೊರೆ, ಮೂಗಿಲ್ಲದವನು, ಸನ್ಯಾಸಿ, ಬೈರಾಗಿ, ಕೆಂಪುಹೂವು, ಒದ್ದೆಬಟ್ಟೆ ಬ್ರಹ್ಮಚಾರಿ, ಒಂಟಿ ಬ್ರಾಹ್ಮಣ, ಬೆಕ್ಕುಗಳ ಜಗಳ, ಋತುವಾದ ಸ್ತ್ರೀ, ಕಟ್ಟಿಗೆ, ಮೊಲ, ಹಾವು, ಅಕಾಲವೃಷ್ಟಿ, ಹಸುಗಳು, ಸೀನುವಿಕೆ ಇವುಗಳನ್ನು ನೋಡಿದರೆ ಪ್ರಯಾಣಕರ್ತರಿಗೆ ಅಶುಭವಾದುದರಿಂದ ಪ್ರಯಾಣ ಮಾಡಕೂಡದು.

## ಉಡುದಶಾಕ್ರಮ

➢ ಇನಶಶಿಕುಜರಾಹುರ್ಜೀವಮಂದಜ್ಞ ಕೇತೂ
ಭೃಗುತನಯನವಾನಾಂ ಕೃತ್ತಿಕಾದಿಕ್ರಮೇಣ।।
ತನುನಯದನಜಾಯಾ ತೋಯ ಧನ್ಯಾಸಟಾಸಾ ।।
ನರ ಇತಿವಿದುರಭಾಸ್ಕರಾದಿ ಕ್ರಮೇಣ ।। 187 ।।

ತಾ ।। ಕೃತ್ತಿಕಾ ನಕ್ಷತ್ರ ಮೊದಲು ಜನ್ಮನಕ್ಷತ್ರದವರೆವಿಗೂ ಎಣಿಸಿ 9 ರಿಂದ ಭಾಗಿಸಿ ಉಳಿದ ಶೇಷ 1 ನಿಂತರೆ ಸೂರ್ಯದಶ 6 ವರ್ಷ, 2 ಉಳಿದರೆ ಚಂದ್ರದಶ 10 ವರ್ಷ, 3 ಉಳಿದರೆ ಕುಜದಶ 7 ವರ್ಷ, 4 ಉಳಿದರೆ ರಾಹುದಶ 18 ವರ್ಷ, 5 ಉಳಿದರೆ ಗುರುದಶ 16 ವರ್ಷ, 6 ಉಳಿದರೆ ಶನಿದಶ 19 ವರ್ಷ, 7 ಉಳಿದರೆ ಬುಧದಶ 17 ವರ್ಷ, 8 ಉಳಿದರೆ ಕೇತುದಶ 7 ವರ್ಷ, 9 ಉಳಿದರೆ ಶುಕ್ರದಶ 20 ವರ್ಷವೆಂಬುದಾಗಿ ದಶಾವರ್ಷಗಳನ್ನು ತಿಳಿಯಬೇಕು.

## ಅಕ್ಷರ ಸಂಕೇತ ವಿವರ

➢ ಸೂತ್ರ ।। ಕಾದಿನವ ಟಾದಿನವ ಪಾದಿಪಂಚ ಯಾದಿನವ ಕ್ಷತವಮೇಕಾದಶಂ ।
ದ್ವಾದಶಂ ಇನಶೂನ್ಯಂ ಅಂಕಾನಾಂ ವಾಮತೋಗತಿಃ ।। 188 ।।

ತಾ ।। ಕ1, ಖ2, ಗ3, ಘ4, ಙ5, ಚ6, ಛ7, ಜ8, ಝ 9, ಟ1, ಠ2, ಡ3, ಢ4, ಣ5, ತ6, ಥ7, ದ8, ಧ9, ಪ1, ಫ2, ಬ3, ಭ4, ಮ5, ಯ1, ರ2, ಲ3, ವ4, ಶ5, ಷ6, ಸ7, ಹ8, ಳ9, ಕ್ಷ11, ತ್ರ12, ಇಂ, ನಂ – ಇಲ್ಲಿ ವ್ಯಂಜನ ಪ್ರಾಧಾನ್ಯವೇ ಹೊರತು ಸ್ವರ ಪ್ರಧಾನ್ಯವಾಗಿರುವುದಿಲ್ಲ. ಅಂಕಿಗಳನ್ನು ವಾಮಾಭಿವೃದ್ಧಿಯಿಂದ ಪರಿಗ್ರಹಿಸಬೇಕೆಂದು ಉಕ್ತವಾಗಿರುತ್ತದೆ.

## ಸಂಯುಕ್ತಾಕ್ಷರವುಳ್ಳ ಹೆಸರಿನ ನಕ್ಷತ್ರ ತಿಳಿಯುವ ಕ್ರಮ

➢ ಕೃಷ್ಣೋ ಹೃಷ್ಣಃ ಶ್ರೀಧರಃ ಕ್ಷೇತ್ರಪಾಲೋ
ಜ್ಞಾನೋ ಭೀಮೋ ಭೈರವಶ್ಚೇತಿನಾಮ್ನಾಂ।।
ಇಂದುರ್ವಾಯುಃ ಸ್ವಷ್ಟ್ರ ಹಸ್ತಾದ್ರ್ರಾಪುಷ್ಯಾ
ಪೂರ್ವಾಷಾಢಾ ಚೇತಿ ಋಕ್ಷಾಣಿ ಸಪ್ತ ।। 189।।

ತಾ ।। ಕೃಷ್ಣನೆಂಬ ಹೆಸರಿಗೆ ಮೃಗಶಿರ, ಹೃಷ್ಣನೆಂಬ ಹೆಸರಿಗೆ ಸ್ವಾತಿ, ಶ್ರೀಧರನೆಂಬ ಹೆಸರಿಗೆ ಚಿತ್ತ, ಕ್ಷೇತ್ರಪಾಲನೆಂಬ ಹೆಸರಿಗೆ ಹಸ್ತ, ಜ್ಞಾನವೆಂಬ ಹೆಸರಿಗೆ ಆದ್ರ್ರಾ,

ಭೀಮನೆಂಬ ಹೆಸರಿಗೆ ಪುಷ್ಯ, ಭೈರವನೆಂಬ ಹೆಸರಿಗೆ ಪೂರ್ವಾಷಾಢ ಎಂಬುದಾಗಿ – ಈ ಪ್ರಕಾರ ಅವಕಹಡ ನಕ್ಷತ್ರಗಳಲ್ಲಿ ಇಲ್ಲದ ಹೆಸರುಗಳಿಗೆ ನಕ್ಷತ್ರಗಳನ್ನು ತಿಳಿಯುವುದು.

## ಜಾತಕರ್ಮ ವಿಷಯ

➢ ತಸ್ಮಿನ್ ಜನ್ಮ ಮುಹೂರ್ತೇಪಿ ಸೂತಕಾಂತೇಪಿವಾಶಿಶೋಃ ||
ಜಾತಕರ್ಮ ಚ ಕರ್ತವ್ಯಂ ಪಿತೃಪೂಜನತತ್ಪರಃ || 190-191 ||

ತಾ || ಜನನವಾದ ಕೂಡಲೇ ಗಂಡುಮಗುವಾಗಲಿ, ಹೆಣ್ಣುಮಗುವಾಗಲಿ ಜಾತಕರ್ಮವನ್ನು ಮಾಡಬೇಕೆಂದು ತಿಳಿಸಿರುವುದು.

## ನಾಮಕರಣ ವಿಷಯ

➢ ನಾಮಕರ್ಮ ದಶಮೇಥವಾಹನಿ ದ್ವಾದಶೇಷು ಚೇಷು ವಾ ವಿಧೀಯತೇ ||
ಸ್ವೋಚ್ಚಮಿತ್ರಭವನೇಷು ಸದ್ಗ್ರಹಾಸ್ತಾದೃಶ್ಯೈರ್ಯದಿವಿ ಲೋಕಿತಾಶ್ಶುಭಾಃ || 192||

ತಾ || ನಾಮಕರಣವನ್ನು ಮಗುವು ಹುಟ್ಟಿದ 10ನೇ ದಿನ, 12ನೇ ದಿನ ಅಥವಾ ಶುಭದಿನಗಳಲ್ಲಾಗಲಿ ಸೂರ್ಯಾದಿ ಗ್ರಹಗಳು ಉಚ್ಚವಾಗಿ ಮಿತ್ರಕ್ಷೇತ್ರಗತರಾಗಿ ಕೇಂದ್ರಗತರಾಗಿರುವ ಉತ್ತಮಲಗ್ನದಲ್ಲಿ ಮಾಡಬೇಕೆಂದು ಉಕ್ತವಾಗಿರುವುದು.

## ಕಂಚುಕಧಾರಣ ವಿಷಯ

➢ ಅಶ್ವಿನೀತ್ವಷ್ಟ್ರ ಸೌಮ್ಯೇಜ್ಯಾಮ್ಯೇಜ್ಯ ಮಿತ್ರೋತ್ತರಕರಾಲಿನೇ ||
ಸಿತಸೌಮ್ಯೇಜ್ಯವಾರೇಷು ಚಂದ್ರತಾರಾಬಲಾನ್ವಿತೇ || 193 ||

ಶುಭೇ ಮುಹೂರ್ತೇ ಪೂರ್ವಾಹ್ಣೇ ಜಯೇಪೂರ್ಣದಿನೇ ತಥಾ ||
ಶಿಶೂನಾಂ ಧಾರಯೇತ್ತತ್ರ ಕಂಚುಕಂ ಚಿತ್ರವರ್ಣಕಮ್ || 194 ||

ತಾ || ಅಶ್ವಿನಿ, ಚಿತ್ತ, ರೇವತಿ, ಪುಷ್ಯ, ಅನೂರಾಧ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ಹಸ್ತ, ಸ್ವಾತಿ ಈ ನಕ್ಷತ್ರಗಳಲ್ಲಿ ಬುಧ, ಗುರು, ಶುಕ್ರವಾರಗಳಲ್ಲಿ ಚಂದ್ರತಾರಾಬಲಯುಕ್ತವಾದ ದಿನಗಳಲ್ಲಿ, ಶುಭದಿನಗಳಲ್ಲಿ, ಜಯತಿಥಿಗಳಲ್ಲಿ, ಪೂರ್ಣತಿಥಿಗಳಲ್ಲಿ, ಪೂರ್ವಾಹ್ನದಲ್ಲಿ ಮಕ್ಕಳಿಗೆ ಹೊಸ ಬಟ್ಟೆಯನ್ನು ತೊಡಿಸುವುದು ಉತ್ತಮವೆಂದು ಉಕ್ತವಾಗಿರುತ್ತದೆ.

## ಡೋಲಾರೋಹಣ ವಿಷಯ (ತೊಟ್ಟಿಲಿಗೆ ಹಾಕುವುದು)

➢ ತೃತೀಯೇ ಪಂಚಮೇ ಮಾಸಿ ತನ್ಮಾಸೇವಾಶುಭೇದಿನೇ ।
ಧಾತೃಮೂಲೋತ್ತರಾತ್ರೀಣಿ ತಿರ್ಯಗ್ಭೇಷು ದ್ವಿದೈವಭೇ ॥
ಚಂದ್ರತಾರಾಬಲಯುತೇ ಚಾಷ್ಟಮೇ ಶುದ್ಧಿಸಂಯುತೇ ॥
ಡೋಲಾಮಾರೋಹಯೇದ್ಬಾಲಂ ದ್ವಿಜಪುಣ್ಯಾಂಗನಾದಿಭಿಃ ॥ 195 ॥

ತಾ ॥ ಮಕ್ಕಳನ್ನು 3 ಅಥವಾ 5ನೇ ತಿಂಗಳುಗಳಲ್ಲಿ ಶುಭದಿನಗಳಲ್ಲಿ ಅಂದರೆ ಚಂದ್ರತಾರಾಬಲಯುಕ್ತವಾಗಿಯೂ, ಅಷ್ಟಮಶುದ್ಧವಾಗಿಯೂ ಇರುವ ಲಗ್ನದಲ್ಲಿ ರೋಹಿಣಿ, ಮೂಲ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ರೇವತಿ, ಪುನರ್ವಸು, ಹಸ್ತ, ಚಿತ್ತ, ಸ್ವಾತಿ, ಅಶ್ವಿನಿ, ಮೃಗಶಿರ, ಅನೂರಾಧ, ಜ್ಯೇಷ್ಠ, ವಿಶಾಖ ನಕ್ಷತ್ರಗಳಲ್ಲಿ ಬ್ರಾಹ್ಮಣರು, ಮುತ್ತೈದೆಯರುಗಳಿಂದ ಕೂಡಿ ಉಯ್ಯಾಲೆ ಮೇಲೆ ಕೂಡಿಸುವುದು ಶ್ರೇಯಸ್ಕರ.

## ಅನ್ನಪ್ರಾಶನ ವಿಷಯ

➢ ಷಷ್ಠಷ್ಟಮೇವಾ ದಶಮೇಚಮಾಸಿ ಸಂವತ್ಸರೇ ವಾ ದಿವಸೇ ಪ್ರವೃದ್ಧೇ ॥
ಪಕ್ಷೇಸಿತೇ ವ್ಯೋಮ್ನಿ ವಿಶುದ್ಧಭಾಜಿ ಬಾಲಾನ್ನಭುಕ್ತಿರ್ವಿಹಿತಾಮುನೀಂದ್ರೈಃ ॥196॥

ತಾ ॥ 6, 8, 10, 12ನೇ ತಿಂಗಳುಗಳಲ್ಲಿ ಶುಕ್ಲಪಕ್ಷದಲ್ಲಿ ಗುರು ಶೂಕ್ರರು ಅಸ್ತರಲ್ಲದ ಶುಭದಿನಗಳಲ್ಲಿ, ಚಂದ್ರತಾರಾಬಲಯುಕ್ತವಾದ ದಿನಗಳಲ್ಲಿ ಲಗ್ನ ಶುದ್ಧವಾಗಿಯೂ, ಸಪ್ತಮಾಷ್ಟಮ ಶುದ್ಧವಾಗಿಯೂ ಇರುವ ಕಾಲದಲ್ಲಿ ಮಕ್ಕಳಿಗೆ ಅನ್ನಪ್ರಾಶನ ಶುಭಕರವು.

## ನೂತನ ವಸ್ತ್ರಧಾರಣ ವಿಷಯ

➢ ಹಸ್ತೋತ್ತರಾನಿಲಪುನರ್ವಸುತಿಷ್ಯಮಿತ್ರ ತ್ವಷ್ಟ್ರದ್ವಿದೈವವಿಧಿ-
ವಾರುಣಪೌಷ್ಣಭೇಷು । ರಿಕ್ತಾಃ ಕ್ರಿಯಾಳಿಹರಿಚಾಪ ಝಷಾರ್ಕಭೌಮ
ವಾರಾನ್ವಿಹಾಯನವವಸ್ತ್ರಮುಶಂತಿಧಾರ್ಯಮ್ ॥ 197॥

ತಾ ॥ ಹಸ್ತ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ಸ್ವಾತಿ, ಪುನರ್ವಸು, ಪುಷ್ಯ, ಅನೂರಾಧಾ, ಚಿತ್ತ, ವಿಶಾಖ, ರೋಹಿಣಿ, ಶತಭಿಷ, ರೇವತಿ ನಕ್ಷತ್ರಗಳಲ್ಲಿಯೂ, ರಿಕ್ತತಿಥಿಗಳನ್ನು ಬಿಟ್ಟು, ಮೇಷ, ವೃಶ್ಚಿಕ, ಸಿಂಹ, ಧನಸ್ಸು, ಮೀನಗಳನ್ನು ಬಿಟ್ಟು ಭಾನುವಾರ, ಶನಿವಾರ, ಮಂಗಳವಾರಗಳನ್ನು ಬಿಟ್ಟು ಇತರ ಶುಭ ದಿನಗಳಲ್ಲಿ ನೂತನ ವಸ್ತ್ರಧಾರಣೆಯನ್ನು ಮಾಡುವುದು.

## ಕೇಶಖಂಡನ (ಕೂದಲು ತೆಗೆಯುವುದು)

➢ ಅಶ್ವಿನಪುಷ್ಯ ಪುನರ್ವಸೂ ಮೃಗಶಿರಸ್ವಾತ್ಯಂತ ವಿಷ್ಣುತ್ರಯಂ
ಚಂದ್ರಜ್ಞಾಮರಪೂಜ್ಯ ಶುಕ್ರಸಹಿತಾಃ ಪೂರ್ಣಾ ಜಯಾಖ್ಯಾಶ್ಶುಭಾಃ ॥
ಪೂರ್ವಾಹ್ಣೇ ಶುಭಲಗ್ನ ಹೋರದಿವಸ ಯುಗ್ಮೇಚ ಮಾಸೇ ಶಿಶೋಃ ॥
ಕೇಶಚ್ಛೇಧನಮಿಷ್ಟದಂ ಮುನಿವರ್ಯೈರುಕ್ತಂ ವರಾಹಾದಿಭಿಃ ॥ 198 ॥

ತಾ ॥ ಅಶ್ವಿನಿ, ಪುಷ್ಯ, ಪುನರ್ವಸು, ಮೃಗಶಿರ, ಸ್ವಾತಿ, ರೇವತಿ, ಶ್ರವಣ, ಧನಿಷ್ಠ, ಶತಭಿಷ ಈ ನಕ್ಷತ್ರಗಳಲ್ಲಿಯೂ, ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಗಳಲ್ಲಿಯೂ, ಪೂರ್ಣತಿಥಿಗಳಲ್ಲಿಯೂ, ಜಯತಿಥಿಗಳಲ್ಲಿಯೂ, ಪೂರ್ವಾಹ್ನದಲ್ಲಿ ಶುಭಲಗ್ನದಲ್ಲಿಯೂ, ಶುಭಹೋರೆಯಲ್ಲಿಯೂ, ಸಮಮಾಸಗಳಲ್ಲಿಯೂ ಕೇಶಚ್ಛೇದನ ವನ್ನು ಮಾಡಬೇಕೆಂದು ಮುನಿಗಳಿಂದಲೂ, ವರಾಹಮಿಹಿರಾಚಾರ್ಯರಿಂದಲೂ ತಿಳಿಸಲ್ಪಟ್ಟಿರುತ್ತದೆ.

## ಕರ್ಣವೇಧ ವಿಷಯ (ಕಿವಿ ಚುಚ್ಚುವುದು)

➢ ಮಾಸೇ ಷಷ್ಠೇ ಸಪ್ತಮೇ ಚಾಷ್ಟಮೇ ವಾ ವೇಧ್ಯೌ ಕರ್ಣೌ ದ್ವಾದಶೇ ಷೋಡಶೇಹ್ನಿ ॥
ಮಧ್ಯೇ ವಾಹ್ನಃ ಪೂರ್ವಭಾಗೇ ನರಾತ್ರೌ ನಕ್ಷತ್ರೇದ್ವೇತಿಥೀ ವರ್ಜಯಿತ್ವಾ ॥ 199॥

ತಾ ॥ ಮಕ್ಕಳು ಜನಿಸಿದ 12-16ನೇ ದಿನದಲ್ಲಾಗಲಿ, 6, 7, 8ನೇ ತಿಂಗಳುಗಳಲ್ಲಿ ಆಗಲಿ, ಮಧ್ಯಾಹ್ನ ಅಂದರೆ ಹಗಲಿನ ಪೂರ್ವಭಾಗದಲ್ಲಿ ಸಂಪೂರ್ಣ ತಿಥಿ, ಸಂಪೂರ್ಣ ನಕ್ಷತ್ರವಿರುವ ದಿವಸ ಚಂದ್ರತಾರಾಬಲವನ್ನು ನೋಡಿ ಕರ್ಣವೇಧವನ್ನು (ಕಿವಿ ಚುಚ್ಚುವುದು) ಮಾಡಬೇಕೆಂದು ಉಕ್ತವಾಗಿರುವುದು.

## ಚೌಲ ವಿಷಯ

➢ ತೃತೀಯವರ್ಷೇಪ್ಯಥಪಂಚಮಾಬ್ದೇ ಗತಿತ್ರಿಭಾಗೇ ಪ್ರವದಂತಿ ಚೌಲಂ ॥
ಉದಗ್ಗತೇರ್ಕೆ ಗುರುಶುಕ್ರತೇಜಃ ಪ್ರಕಾಶಿತೇ ವ್ಯೋಮ್ನಿ ಚ ಶುಕ್ಲಪಕ್ಷೇ ॥200॥

ತಾ ॥ 3 ಅಥವಾ 5ನೇ ವರ್ಷದಲ್ಲಾಗಲೀ ಅಂದರೆ ಭಾಗ ಕಳೆದ 5ನೇ ವರ್ಷದಲ್ಲಿ ಉತ್ತರಾಯಣದಲ್ಲಿ ಗುರುಶುಕ್ರರ ಅಸ್ತವಿಲ್ಲದೆ ಪ್ರಕಾಶಮಾನರಾಗಿರುವಾಗ್ಗೆ ಶುಕ್ಲಪಕ್ಷದಲ್ಲಿ ಚೌಲವನ್ನು ಮಾಡಬೇಕೆಂದು ಹೇಳಿರುವುದು.

> ಆದಿತ್ಯಸೌಮ್ಯವಸು ವೈಷ್ಣವಪೌಷ್ಯತಿಷ್ಯ ತ್ವಷ್ಟ್ರ್ಯಶ್ವಿ ಚಂಡಕಿರಣೇಷು ದಿವಾ ಪ್ರಶಸ್ತಂ॥
> ಸ್ವಾತೀವಿಧಾತೃವರುಣೋತ್ತರಭಾನಿಮಧ್ಯಾ ಸ್ಯಾಹುರ್ನಿಶಾಸ್ವಪಿನ-
> ಚಕ್ಷುರಕರ್ಮ ಕಾರ್ಯಮ್ ॥ 201 ॥

ತಾ ॥ ಪುನರ್ವಸು, ಮೃಗಶಿರ, ಧನಿಷ್ಠ, ಶ್ರವಣ, ರೇವತಿ, ಪುಷ್ಯ, ಚಿತ್ತ, ಅಶ್ವಿನಿ, ಹಸ್ತ ಈ ನಕ್ಷತ್ರಗಳಲ್ಲಿಹಗಲು ಪ್ರಶಸ್ತ, ರೋಹಿಣಿ, ಶತಭಿಷ, ಉತ್ತರಾಷಾಢ, ಉತ್ತರಾಭಾದ್ರ ನಕ್ಷತ್ರಗಳು ಮಧ್ಯಮ, ರಾತ್ರಿಕಾಲದಲ್ಲಿ ಕ್ಷೌರಕರ್ಮವನ್ನು ಮಾಡಕೂಡದು ಎಂದು ಹೇಳಿರುವುದು.

> ಸೂನೋರ್ಮಾತರಿ ಗರ್ಭಿಣ್ಯಾಂ ಚೂಡಾಕರ್ಮ ನ ಕಾರಯೇತ್।
> ಯದಿ ಕುರ್ಯಾದ್ವಿಪತ್ತಿಃ ಸ್ಯಾದ್ದಂಪತ್ಯೋಶ್ಚ ಶಿಶೋಶ್ಚ ವಾ ॥202॥

ತಾ ॥ ಹುಡುಗನ ತಾಯಿಯು ಗರ್ಭಿಣಿಯಾಗಿದ್ದಲ್ಲಿ ಚೌಲವನ್ನು ಮಾಡಬಾರದು. ಹಾಗೆ ಮಾಡಿದ್ದೇ ಆದಲ್ಲಿ ತಂದೆತಾಯಿಗಳಿಗೂ, ಹುಡುಗನಿಗೂ ಸಹ ವಿಪತ್ತು ತಪ್ಪದೆಂದು ತಿಳಿಯುವುದು.

## ಅಕ್ಷರ ಸ್ವೀಕರಣ ವಿಷಯ

> ಉದಗರ್ಕೇ ಪಂಚಮೇಬ್ದೇ ಪಂಚಮೇ ಮಾಸಿ ಪಂಚಮೇ ।
> ದಿವಸೇಪಿ ಚ ಬಾಲಾನಾಂ ಅಕ್ಷರಗ್ರಹಣಂ ಸ್ಮೃತಮ್ ॥203॥

ತಾ ॥ ಉತ್ತರಾಯಣದಲ್ಲಿ ಬಾಲಕರಿಗೆ 5ನೇ ವರ್ಷದಲ್ಲಿ, 5ನೇ ತಿಂಗಳಲ್ಲಿ, 5ನೇ ದಿನದಲ್ಲಿ ಚಂದ್ರತಾರಾಯುಕ್ತವಾದ ದಿನಗಳಲ್ಲಿ ನಿಷ್ಪಂಚಕವಾಗಿಯೂ, ಶುಭಗ್ರಹ ವೀಕ್ಷಣೆಯೂ, ಶುಭಸ್ಥಿತಿಯೂ ಇರುವ ಕಾಲದಲ್ಲಿ ಅಕ್ಷರ ಸ್ವೀಕರಣವನ್ನು (ಅಕ್ಷರಾಭ್ಯಾಸ) ಮಾಡಿಸುವುದು.

## ಉಪನಯನ ಪ್ರಕರಣ

> ಉಕ್ತರ್ತಾಗರ್ಭಾಷ್ಟಮಾದ್ಯುಕ್ತವರ್ಷೇ ವಿಪ್ರಾದೀನಾಮುಚ್ಯತೇ ಮೌಂಜೀಬಂಧಃ।
> ಅರ್ಥಾಯಸ್ತ್ರೀಧರ್ಮ ಪುತ್ರಾಖ್ಯ ಸಂಸ್ಥೇ ಚೇದ್ವಾಗೀಶೇ ಸ್ಯಾಚ್ಛಿಶೋರ್ಮೌಂಜಿ-
> ಬಂಧಮ್ ॥204॥

ತಾ ॥ ಉಕ್ತವಾಗಿರುವ ಗರ್ಭಾಷ್ಟಮದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಹೇಳಿರುವ ವರ್ಷಗಳಲ್ಲಿ ಉಪನಯನವನ್ನು ಮಾಡುವುದು. ಬೃಹಸ್ಪತಿಯು ಉಪನೀತನ ಜನ್ಮರಾಶಿಗೆ 2, 11, 7, 9, 5 ಈ ಸ್ಥಾನಗಳಲ್ಲಿರುವ ಕಾಲದಲ್ಲಿ ಉಪನಯನವನ್ನು ಮಾಡುವುದು.

➢ ಚಂದ್ರಾದಿತ್ಯೋತ್ತರಾಶ್ವಿ ಶ್ರವಣ ವಸುವರುತ್ತಷ್ಟಪೌಷ್ಯಾರ್ಕಮಿತ್ರ ಪಾಜೇಷಾರೇಷು ಸೌಮ್ಯಾಮರಗುರುಶಶಿಭೃದ್ವಾರರಾಶ್ಯಂಶಕೇಷು ॥ ತ್ಯಕ್ತ್ವಾ ನಧ್ಯಾಯ-ರಿಕ್ತಾಪಿತೃತಿಥಿಷುಯಮಾರಾರ್ಕಯುಕ್ತಾನರಾಶೌಗೋ ಚೋಪಾಂತ್ಯಾಂಗನಾಕರ್ಕ ತುಲಾ ಮಿಥುನ ಬೊಷ್ಟಷ್ಟಮೇಧಾಮ್ನಿಶುದ್ಧೇ ॥205॥

ತಾ ॥ ಪುನರ್ವಸು, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ಅಶ್ವಿನಿ, ಶ್ರವಣ, ಧನಿಷ್ಠ, ಸ್ವಾತಿ, ಚಿತ್ತ, ರೇವತಿ, ಹಸ್ತ, ಅನೂರಾಧಾ, ರೋಹಿಣಿ, ಪುಷ್ಯ ನಕ್ಷತ್ರಗಳಲ್ಲಿಯೂ, ಸೋಮವಾರ, ಬುಧವಾರ, ಗುರುವಾರ, ಶುಕ್ರವಾರಗಳಲ್ಲಿಯೂ, ಈ .ಗ್ರಹಗಳ ರಾಶಿ ಅಂಶಗಳಲ್ಲಿಯೂ, ಅನಧ್ಯಾಯ ದಿನಗಳನ್ನು - ರಿಕ್ತ ತಿಥಿಗಳನ್ನು, ನೈಮಿತ್ತಿಕಾನಧ್ಯಾಯ ದಿನಗಳನ್ನು - ಪಿತೃತಿಥಿಗಳೆಂದರೆ ಶ್ರಾದ್ಧ ದಿನಗಳನ್ನು, ಶನಿ, ಅಂಗಾರಕ, ಸೂರ್ಯರಿಂದ ಕೂಡಿದ ರಾಶಿಗಳನ್ನು ಬಿಟ್ಟು ವೃಷಭ, ಕನ್ಯಾ, ಕರ್ಕಾಟಕ, ತುಲಾ, ಮಿಥುನ ರಾಶಿಗಳಲ್ಲಿ ಅಷ್ಟಮಶುದ್ಧಿಯೂ, ರವಿರೇಕಾದಶವೂ, ಕೇಂದ್ರಶುದ್ಧಿಯೂ ಇರುವ ಲಗ್ನಗಳಲ್ಲಿ ಚಂದ್ರತಾರಾಬಲಯುಕ್ತವಾಗಿರುವ ಶುಭಲಗ್ನದಲ್ಲಿ ಉಪನಯನವನ್ನು ಮಾಡಬೇಕೆಂದು ನಿಶ್ಚಯಿಸಿರುವುದು.

## ವಿವಾಹಯೋಗ್ಯ ಮಾಸಗಳು

➢ ಮಾಘ ಪಾಲ್ಗುಣ ವೈಶಾಖ ಜ್ಯೇಷ್ಠಮಾಸಾಶ್ಶುಭಪ್ರದಾ ॥
ಮಧ್ಯಮೌ ಕಾರ್ತಿಕೋ ಮಾರ್ಗಶೀರ್ಷೋ ವೈನಿಂದಿತಾಃ ಪರೇ ॥206॥

ತಾ ॥ ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠಮಾಸಗಳು ವಿವಾಹಕ್ಕೆ ಉತ್ತಮ. ಕಾರ್ತಿಕ, ಮಾರ್ಗಶಿರಮಾಸಗಳು ಮಧ್ಯಮ. ಇತರ ಮಾಸಗಳು ನಿಂದಿತವೆಂದು ಉಕ್ತವಾಗಿರುತ್ತದೆ.

➢ ವಿವಾಹೇ ಬಲಮಾವಶ್ಯಂ ದಂಪತ್ಯೋರ್ಗುರು ಸೂರ್ಯಯೋಃ ॥
ಚೇತ್ಪೂಜಾಂ ಯತ್ನತಃ ಕುರ್ಯಾತ್ ದುರ್ಬಲಪ್ರದಯೋಸ್ತಯೋಃ ॥207॥

ತಾ ॥ ದಂಪತಿಗಳಿಗೆ ವಿವಾಹಕಾಲದಲ್ಲಿ ಗುರುಸೂರ್ಯರ ಬಲವು ಅತ್ಯವಶ್ಯಕವಾಗಿ ಇರಬೇಕು. ಸಾಮಾನ್ಯವಾಗಿ ಇದ್ದದ್ದೇ ಆದರೆ ಈ ಗುರುಸೂರ್ಯ ಗ್ರಹಗಳಿಗೆ ಪೂಜಾ-ಶಾಂತಿಗಳನ್ನು ಮಾಡಬೇಕೆಂದು ಉಕ್ತವಾಗಿರುವುದು.

➢ ಶುಭೇಕ್ಷಿತಯುತಾನಸ್ತಾ ಉದ್ವಾಹೇಖಿಲರಾಶಯಃ ॥
ಶುಭಷಡ್ವರ್ಗಗೇ ಲಗ್ನೇ ಮಖಾದೋಷವಿವರ್ಜಿತೇ ॥
ಜಾಮಿತ್ರೇ ಶುದ್ಧ ಸಂಯುಕ್ತೇ ವಿವಾಹಶ್ಶುಭದೋ ಮತಃ ॥208॥

ತಾ ll ವಿವಾಹಕಾಲದಲ್ಲಿ ಸಪ್ತಮಾಷ್ಟಮ ರಾಶಿಗಳು ಶುದ್ಧವಾಗಿದ್ದಲ್ಲಿ ಅಥವಾ ಶುಭಗ್ರಹಗಳಿಂದ ಕೂಡಿದ್ದಲ್ಲಿ, ನೋಡಿದ್ದಲ್ಲಿ ವಿವಾಹಲಗ್ನವು ಶುಭ ಷಡ್ವರ್ಗಗಳಿಂದ ಕೂಡಿ ಇರುವಂಥ್ವಾಗಿಯೂ, ಏಕವಿಂಶತಿ ದೋಷಗಳಿಂದ ಕೂಡಿ ಇರದೆ ಶುಭಲಗ್ನವಾಗಿ ಇರುವ ಕಾಲದಲ್ಲಿ ಲಗ್ನವನ್ನು ಮಾಡಲು ಅತ್ಯಂತ ಶ್ರೇಯಸ್ಕರವೆಂದು ತಿಳಿಯುವುದು.

➤ **ಉಚ್ಚಗಶ್ಶುಭ ಏಕೋಪಿ ಲಗ್ನಗೋ ದೋಷಸಂಚಯಃ ll**
**ಹಂತಿ ಪಾಪಾನ್ ಹರಿತಿಥೌ ಚೋಪವಾಸವ್ರತಂ ಯಥಾ ll209ll**

ತಾ ll ಲಗ್ನದಲ್ಲಿ ಉಚ್ಚವಾದ ಒಂದು ಶುಭಗ್ರಹ ಒಬ್ಬನಿದ್ದದ್ದೇ ಆದರೆ ಆ ಲಗ್ನಕ್ಕೆ ಪ್ರಾಪ್ತವಾಗುವ ಸಮಸ್ತ ದೋಷಗಳನ್ನು, ಹರಿದಿವಸವಾದ ಏಕಾದಶಿಯಲ್ಲಿ ಉಪವಾಸ ಮಾಡಿದಲ್ಲಿ ಹೇಗೆ ಸಮಸ್ತ ಪಾಪಗಳು ನಾಶವಾಗುವುದೋ ಅದೇ ರೀತಿ ಲಗ್ನಕ್ಕೆ ಪ್ರಾಪ್ತವಾದ ಸಮಸ್ತ ದೋಷಗಳು ನಾಶವಾಗುವುದೆಂದು ಉಕ್ತವಾಗಿರುತ್ತದೆ.

➤ **ಏಕೋಪಿ ಮಿತ್ರರಾಶಿಸ್ಥಃ ಶುಭೋಯದಿವಿಲಗ್ನಗಃ ll**
**ಹಂತಿದೋಷಾನ್ ಮಹಾದೋಷಾನ್ ಶಿವರಾತ್ರಿವ್ರತಂ ಯಥಾ ll210ll**

ತಾ ll ಯಾವ ಶುಭಗ್ರಹವಾಗಲಿ ವಿವಾಹ ಲಗ್ನಾಧಿಪತಿಗೆ ಮಿತ್ರನಾಗಿ ಲಗ್ನದಲ್ಲಿ ಶುಭಗ್ರಹಯುಕ್ತನಾಗಿದ್ದರೆ, ಶಿವರಾತ್ರಿ ವ್ರತಾಚರಣೆಯಿಂದ ಮಹಾದೋಷಗಳು ಹೇಗೆ ನಾಶವಾಗುವುದೋ ತದ್ರೀತ್ಯಾ ಲಗ್ನಕ್ಕೆ ಪ್ರಾಪ್ತವಾದ ಸಮಸ್ತ ದೋಷಗಳು ಪರಿಹಾರವಾಗುವುದೆಂದು ಉಕ್ತವಾಗಿರುವುದು.

➤ **ವಿಪದಿ ಪ್ರತ್ಯಗೇ ಚೈವ ಪರಮಂ ಚ್ಯಾದ್ಯಕಂ ವಿನಾ l**
**ಸ್ವೋಚ್ಚಸ್ವರ್ಕ್ಷಗತಶ್ಚಂದ್ರಃ ಸುಖದಸ್ಸರ್ವಕಾರ್ಯಸು ll211ll**

ತಾ ll ವಿಪತ್ತಾರಾ, ಪ್ರತ್ಯಕ್ತಾರಾ, ಪರಮಮೈತ್ರತಾರಾ, ಜನ್ಮತಾರಾ, ನೈಧನತಾರಾ ಇವುಗಳನ್ನು ಬಿಟ್ಟು ಚಂದ್ರನು ಸ್ವಕ್ಷೇತ್ರ, ಉಚ್ಚ ಕ್ಷೇತ್ರ, ಮಿತ್ರಕ್ಷೇತ್ರಗತನಾಗಿ ಇದ್ದದ್ದೇ ಆದರೆ ಸಮಸ್ತ ಶುಭಕಾರ್ಯಗಳನ್ನು ಮಾಡಬೇಕೆಂದು ಉಕ್ತವಾಗಿರುವುದು.

➤ **ಜನ್ಮರ್ಕ್ಷಲಗ್ನಯೋರ್ವಾಪಿ ಚಂದ್ರಶಸ್ತ ಶುಭೇಕ್ಷಿತಃ ll**
**ಕೇಂದ್ರೇ ಶುಭೇ ಸವರ್ಗೇವಾ ಲಗ್ನಾದುಪಚಯೇಪಿ ವಾ ll212ll**

ತಾ || ಜನ್ಮತಾರೆಯು ವಿವಾಹಲಗ್ನದಲ್ಲಾಗಲೀ, ಜನ್ಮನಕ್ಷತ್ರದಲ್ಲಾಗಲೀ ಚಂದ್ರನಿದ್ದು ಶುಭಗ್ರಹಗಳಿಂದ ನೋಡಲ್ಪಟ್ಟವನಾಗಿ ಕೇಂದ್ರಗಳಲ್ಲಿ ಶುಭ ಗ್ರಹಗಳು ಇದ್ದರೂ ಅಥವಾ ಉಪಚಯರಾಶಿಗಳಲ್ಲಿ ಇದ್ದರೂ ಜನ್ಮತಾರಾ ದೋಷವಿಲ್ಲವೆಂದು ಉಕ್ತವಾಗಿರುವುದು.

➢ **ಜೀವೇಸಿತೇ ಕಂಟಕಸ್ಥೇ ಪಾಪೇವಾತ್ರಿಷಡಾಯಗೇ ||**
**ವಾರರ್ಕ್ಷತಿಥಿ ಯೋಗಾನಾಂ ದೋಷಮಾಶು ವ್ಯಪೋಹತಿ ||213||**

ತಾ || ಗುರು, ಶುಕ್ರ ಗ್ರಹಗಳು ಕೇಂದ್ರಗತರಾಗಿಯೂ, ಪಾಪಗ್ರಹಗಳು 3, 6, 11 ಇದ್ದವರಾದರೆ ವಾರ, ತಿಥಿ, ನಕ್ಷತ್ರಜನಿತ ಸಮಸ್ತ ದೋಷಗಳನ್ನು ನಾಶ ಪಡಿಸುತ್ತಾರೆಂದು ಉಕ್ತವಾಗಿರುತ್ತದೆ.

➢ **ಏವಂ ಗುಣಗಣಾನ್ ವೀಕ್ಷ್ಯ ಲಗ್ನಂ ನಿಶ್ಚಿತ ಯತ್ನತಃ ||**
**ಸಿದ್ಧಾಂತಕೇನ ಮಾರ್ಗೇಣ ಲಗ್ನಕಾಲಂ ಸಮೀರಯೇತ್ ||214||**

ತಾ || ಪೂರ್ವೋಕ್ತ ಪ್ರಕಾರವಾಗಿ ಗುಣಗಣಗಳಿಂದ ಕೂಡಿದ ಸುಮುಹೂರ್ತವನ್ನು, ಸಿದ್ಧಾಂತೋಕ್ತ ಪ್ರಕಾರವಾಗಿ ಲಗ್ನಕಾಲವನ್ನು ನಿಶ್ಚಯಿಸಿ ವಿವಾಹ ಕರ್ಮವನ್ನು ಆಚರಿಸುವುದು.

## ವಿವಾಹಯೋಗ್ಯ ನಕ್ಷತ್ರಗಳು

➢ **ಮೂಲಮೈತ್ರ ಮೃಗರೋಹಿಣೀಕರೈಃ ಪೌಷ್ಣಮಾರುತ ಮಘೋತ್ತರಾನ್ವಿತೈಃ ||**
**ಶಾಸ್ತ್ರವಿದ್ಭಿರುಡುಭಿರ್ಮೃಗೀದೃಶಾಂ ಪಾಣಿಪೀಡನ ವಿಧಿರ್ವಿಧೀಯತೇ ||215||**

ತಾ || ಮೂಲ, ಅನೂರಾಧ, ಮೃಗಶಿರ, ರೋಹಿಣಿ, ಹಸ್ತ, ರೇವತಿ, ಸ್ವಾತಿ, ಮಖ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ ಈ 11 ನಕ್ಷತ್ರಗಳು ವಿವಾಹಕ್ಕೆ ಅತ್ಯಂತ ಪ್ರಶಸ್ತ. ಇತರ ನಕ್ಷತ್ರಗಳು ಶ್ರೇಷ್ಠವಲ್ಲವೆಂದು ಉಕ್ತವಾಗಿದೆ.

## ಲಗ್ನಬಲ ವಿಷಯ

➢ **ಶುಕ್ರಃ ಪಂಚಸಹಸ್ರಾಣಿ ಬುಧಃ ಪಂಚಶತಾನಿಚ ||**
**ಲಕ್ಷಮೇಕಂ ತು ದೋಷಾಣಾಂ ಗುರುಃ ಕೇಂದ್ರೇವ್ಯಪೋಹತಿಃ ||216||**

ತಾ || ವಿವಾಹಲಗ್ನಕ್ಕೆ ಕೇಂದ್ರಗಳಲ್ಲಿ ಶುಕ್ರನು ಇದ್ದರೆ ಐದು ಸಹಸ್ರ ದೋಷಗಳನ್ನು ಪರಿಹಾರ ಮಾಡುವನು. ಬುಧನು ಇದ್ದರೆ ಐದು ನೂರು ದೋಷಗಳನ್ನು ಪರಿಹರಿಸುವನು. ಗುರುವು ಕೇಂದ್ರಗತನಾಗಿ ಇದ್ದದ್ದೇ ಆದರೆ ಒಂದು ಲಕ್ಷ ದೋಷಗಳನ್ನು ಪರಿಹರಿಸುವನೆಂದು ಉಕ್ತವಾಗಿರುವುದು.

## ಅಭಿಜಿತ್ ಲಗ್ನ ವಿಷಯ

➤ ಮಧ್ಯಂ ದಿನಗತೇ ಭಾನೌ ಮುಹೂರ್ತೋಽಭಿಜಿದಾಹ್ವಯಃ ॥
ಸರ್ವದೋಷಾನ್ನಿಹಂತ್ಯಾಶು ಪಿನಾಕೀ ತ್ರಿಪುರಂ ಯಥಾ ॥217॥

ತಾ ॥ ಸೂರ್ಯನು ಮಧ್ಯದಿನಕ್ಕೆ ಅಂದರೆ ತನ್ನ ನೆತ್ತಿಯ ಮೇಲಕ್ಕೆ ಸರಿಯಾಗಿ ಯಾವಾಗ್ಯೆ ಬರುವನೋ ಆ ಕಾಲಕ್ಕೆ ಸರಿಯಾಗಿ ಬರುವ ಲಗ್ನಕ್ಕೆ ಅಭಿಜಿತ್ ಲಗ್ನವೆಂತಲೂ, ಈಶ್ವರನು ತ್ರಿಪುರನನ್ನು ಯಾವ ರೀತಿ ಜಯಿಸಿ ಜಯಶೀಲನಾಗಿರುವನೋ ಅದರಂತೆ ಈ ಅಭಿಜಿತ್ ಲಗ್ನದಲ್ಲಿ ಯಾವ ಕಾರ್ಯವನ್ನು ಮಾಡಿದರೂ ಜಯವಾಗುತ್ತದೆಂದು ಉಕ್ತವಾಗಿರುವುದು.

## ಗೋಧೂಳಿ ಲಗ್ನ ವಿಷಯ

➤ ಅಭಿಜಿತ್ಸರ್ವ ಕಾರ್ಯೇಷು ಶಸ್ತಂ ನಾತ್ರೋಪನಾಯನಮ್ ॥
ಸೂರ್ಯಾತ್‌ಸಪ್ತಲಗ್ನಂ ಯಃ ಗೋಧೂಳಿಕಮಿತಿ ಶ್ರುತಮ್ ॥218॥

ತಾ ॥ ಅಭಿಜಿತ್ ಲಗ್ನದಲ್ಲಿ ಉಪನಯನವಲ್ಲದ ಎಲ್ಲ ಶುಭಕಾರ್ಯಗಳು ಮಾಡಲು ಪ್ರಶಸ್ತವಾಗಿರುವುದು. ಅದರಂತೆ ಸೂರ್ಯೋದಯ ಕಾಲಕ್ಕೆ ಲಗ್ನ ಏಳನೆಯದಾದ ಅಸ್ತಲಗ್ನವು ಕೂಡಿ ಗೋಧೂಳಿಲಗ್ನವೆಂದೂ, ಈ ಗೋಧೂಳಿ ಲಗ್ನದಲ್ಲಿ ಸಮಸ್ತ ಶುಭ ಕಾರ್ಯಗಳನ್ನು ಮಾಡಬಹುದೆಂದು ಉಕ್ತವಾಗಿರುವುದು.

## ವಧೂಪ್ರವೇಶ ಕಾಲ

➤ ನೀಹಾರಾಂಶುವಸೂತ್ತರಾದಿಗುರುಸ್ರಷ್ಟಾನುರಾಧಾಶ್ವಿನಿ ।
ಶುಕ್ರಾಹಸ್ಕರವಾಯುವಾರುಣಹರಿತ್ವಾಷ್ಟ್ರೇ ಪ್ರಶಸ್ತೇ ತಿಥೌ ॥
ಕುಂಭಾಜಾಳಿಗತೇತುಖರಕರೇ ಪ್ರಾಪ್ತೋದಯೇ ಭಾರ್ಗವೇ ।
ಜೀವಾರ್ಕಾಸ್ಫುಜಿತಾದಿನೇ ನವವಧೂಸದ್ಮಪ್ರವೇಶಶ್ಶುಭಃ ॥219॥

ತಾ ॥ ಮೃಗಶಿರ, ಧನಿಷ್ಠ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ಪುನರ್ವಸು, ಪುಷ್ಯ, ರೋಹಿಣಿ, ಅನೂರಾಧ, ಅಶ್ವಿನಿ, ಜ್ಯೇಷ್ಠ, ಹಸ್ತ, ಸ್ವಾತಿ, ಶತಭಿಷ, ಶ್ರವಣ, ಚಿತ್ತ ಈ ನಕ್ಷತ್ರಗಳಲ್ಲಿಯೂ, ಪ್ರಶಸ್ತವಾದ ತಿಥಿಗಳಲ್ಲಿಯೂ, ಸೂರ್ಯನು ಕುಂಭ, ಮೇಷ, ವೃಶ್ಚಿಕ ರಾಶಿಗಳಲ್ಲಿರುವ ಕಾಲದಲ್ಲಿಯೂ, ಗುರು ಶುಕ್ರರೇ ಉದಯವಾಗಿರುವ ಕಾಲದಲ್ಲಿಯೂ, ದಂಪತಿಗಳಿಗೆ ಚಂದ್ರತಾರಾಬಲ ಯುಕ್ತವಾಗಿರುವ ಕಾಲದಲ್ಲಿಯೂ ನೂತನ ವಧೂಪ್ರವೇಶವನ್ನು ಮಾಡಬೇಕೆಂದು ಉಕ್ತವಾಗಿರುವುದು.

## ವರ್ಷಮಾಸಾಂತ್ಯ ವರ್ಜ್ಯ ದಿನಗಳು

> **ವರ್ಷಾಂತೇ ವರ್ಜಯೇತ್ಪಕ್ಷಂ ಮಾಸಾಂತೇ ಚ ದಿನತ್ರಯಮ್ ॥**
> **ಪಕ್ಷಾಂತೇ ಘಟಿಕಾದ್ವೇ ಚ ಗ್ರಹಣೇ ದಿನಸಪ್ತಕಮ್ ॥**

**ತಾ ॥** ವರ್ಷಾಂತ್ಯದಲ್ಲಿ ಒಂದು ಪಕ್ಷವನ್ನೂ, ಮಾಸಾಂತ್ಯದಲ್ಲಿ ಮೂರು ದಿನಗಳನ್ನೂ, ನಕ್ಷತ್ರಾಂತ್ಯದಲ್ಲಿ ಎರಡು ಘಳಿಗೆಗಳನ್ನೂ ಗ್ರಹಣಕಾಲದಲ್ಲಿ ಪೂರ್ವಾಪರ ಏಳು ದಿನಗಳನ್ನೂ ಶುಭಕರ್ಮ ಮಾಡತಕ್ಕವರು ಬಿಡಬೇಕೆಂದು ಉಕ್ತವಾಗಿರುವುದು.

## ಏಕವಿಂಶತಿ ದೋಷಗಳು (21 ದೋಷಗಳು)

1. **ಪಂಚಾಂಗಶುದ್ಧಿಹೀನ :** ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳು ಅಶುದ್ಧವಾಗಿದ್ದರೆ ಅದು ಪಂಚಾಂಗಶುದ್ಧಿಹೀನವೆನಿಸಿಕೊಳ್ಳುವುದು.

2. **ಸಂಕ್ರಾಂತಿಯುಕ್ತ ತಿಥಿದೋಷ :** ಸೂರ್ಯನು ಮೇಷಾದಿ ದ್ವಾದಶರಾಶಿಗಳಲ್ಲಿ ಪ್ರವೇಶ ಮಾಡುವಾಗ್ಗೆ ಪೂರ್ವಾಪರಗಳಲ್ಲಿ 20-20 ಘಳಿಗೆಗಳನ್ನು ಬಿಡಬೇಕು. ಸೂರ್ಯನು ಮೇಷ, ಕರ್ಕಾಟಕ, ತುಲಾ, ಮಕರ ರಾಶಿಗಳಲ್ಲಿ ಪ್ರವೇಶಿಸಿವಾಗ್ಗೆ 40-40 ಘಳಿಗೆಗಳನ್ನು ಬಿಡಬೇಕು. ಮೇಷ, ತುಲಾ, ಕರ್ಕಾಟಕ, ಮಕರರಾಶಿಗಳಲ್ಲಿ ಅಯನಿಸುವಾಗ್ಗೆ 20-20 ಘಳಿಗೆಗಳನ್ನು ಬಿಡಬೇಕು. ಇದು ಸಂಕ್ರಾಂತಿಯುಕ್ತ ತಿಥಿದೋಷವೆನಿಸಿಕೊಳ್ಳುವುದು.

3. **ಪಾಪಗ್ರಹ ಷಡ್ವರ್ಗದೋಷ :** ಮೇಷ, ಸಿಂಹ, ವೃಶ್ಚಿಕ, ಕುಂಭ ರಾಶಿಗಳು ಪಾಪಗ್ರಹಾಕಾಂತರಾಗಿ ಪಾಪಷಡ್ವರ್ಗವು ಪ್ರಾಪ್ತವಾದರೆ ಖಂಡಿತ ಬಿಡುವುದು. ಉಳಿದ ಲಗ್ನಗಳು ಶುಭಕರವು. ಮುಖ್ಯ ಷಡ್ವರ್ಗದಲ್ಲಿ ನವಾಂಶವೇ ಮುಖ್ಯವಾದುದರಿಂದ ಮೇಷಾಂಶದಲ್ಲಿ ಆಯುಃ ಕ್ಷೀಣತೆಯೂ, ವೃಷಭಾಂಶದಲ್ಲಿ ಗೋಸಮೃದ್ಧಿಯೂ, ಮಿಥುನಾಂಶದಲ್ಲಿ ಪುತ್ರವೃದ್ಧಿಯೂ, ಕರ್ಕಾಟಕದಲ್ಲಿ ವ್ಯಭಿಚಾರವೂ, ಸಿಂಹಾಶದಲ್ಲಿ ಅಧೀನರಹಿತತ್ವವೂ, ಕನ್ಯಾಂಶದಲ್ಲಿ ಸುಗುಣವೂ, ತುಲಾಂಶದಲ್ಲಿ ಸಂತಾನಸಂಪತ್ತೂ, ವೃಶ್ಚಿಕಾಂಶದಲ್ಲಿ ವ್ಯಭಿಚಾರವೂ, ಪಂಚಕತ್ವವೂ, ಧನುರಂಶದಲ್ಲಿ ಸತ್ಕರ್ಮಾಸಕ್ತಿಯೂ, ಮಕರಾಂಶದಲ್ಲಿ ಆಚಾರರಹಿತ್ವವೂ, ಕುಂಭಾಂಶದಲ್ಲಿ ರೋಗಪ್ರಾಪ್ತಿಯೂ, ಮೀನಾಂಶದಲ್ಲಿ ದೇವತಾಕಾರ್ಯ ನಿರತತ್ವವೂ ಇತ್ಯಾದಿ ಫಲಗಳು ಉಂಟಾಗುವುದರಿಂದ ಇದು ಪಾಪಗ್ರಹ ಷಡ್ವರ್ಗವೆನ್ನಿಸಿಕೊಳ್ಳುವುದು.

4. **ಕುಜಾಷ್ಟಮದೋಷ :** ಲಗ್ನಕ್ಕೆ ಎಂಟನೇ ಕಡೆ ಅಂಗಾರಕನಿದ್ದರೆ ಕುಜಾಷ್ಟಮದೋಷ ಎನ್ನಿಸಿಕೊಳ್ಳುವುದು.

5. **ಭೃಗುಷಟ್ಕದೋಷ :** ಲಗ್ನಕ್ಕೆ ಆರನೇ ಕಡೆ ಶುಕ್ರನಿದ್ದರೆ ಇದಕ್ಕೆ ಭೃಗುಷಟ್ಕವೆಂದೂ, ಮೃತ್ಯುಪ್ರದವೆಂದೂ ಸಹ ಉಕ್ತವಾಗಿರುತ್ತದೆ.

6. **ಕರ್ತರಿದೋಷ :** ಎರಡು ಪಾಪಗ್ರಹಗಳ ಮಧ್ಯದಲ್ಲಿ ಲಗ್ನವಿದ್ದಲ್ಲಿ ಕರ್ತರಿ-ದೋಷವೆನ್ನಿಸಿಕೊಳ್ಳುತ್ತದೆ.

7. **ಅಷ್ಟಮಲಗ್ನದೋಷ :** ಜನನಕಾಲ ಲಗ್ನಕ್ಕೂ ಚಂದ್ರನಿಗೂ ಸಹ ಎಂಟನೇ ಲಗ್ನವು ಎಷ್ಟು ಗುಣಗಳಿಂದ ಕೂಡಿದ್ದರೂ ನಿಷಿದ್ಧವಾದುದು. ಅಷ್ಟಮಲಗ್ನಾಧಿಪತಿ ಲಗ್ನದಲ್ಲಿದ್ದರೆ ಮೃತ್ಯುಪ್ರದವು. ಚಂದ್ರನು ಜನ್ಮರಾಶಿಗೆ ಅಷ್ಟಮ ರಾಶಿಗತನಾದರೆ ಅದು ಸಹ ಮೃತ್ಯುಪ್ರದವು. ಆದ್ದರಿಂದ ಇದು ಅಷ್ಟಮ ಲಗ್ನದೋಷವೆನ್ನಿಸಿಕೊಳ್ಳುತ್ತದೆ.

8. **ಅಷ್ಟಮಚಂದ್ರದೋಷ :** ಚಂದ್ರನು ಲಗ್ನಕ್ಕೆ 6, 8, 12ನೇ ಮನೆಗಳಲ್ಲಿದ್ದರೆ ಚಂದ್ರಷಷ್ಠಾಷ್ಟಮರಿಃಫ ದೋಷವೆಂದೂ, ಇದು ಸಕಲಕಾರ್ಯಗಳಿಗೆ ನಿಂದ್ಯ ವೆಂದೂ, ಇದು ಚಂದ್ರಾಷ್ಟಮದೋಷವೆಂದೂ ತಿಳಿಸಿರುತ್ತದೆ.

9. **ಸಹಸ್ರಚಂದ್ರದೋಷ :** ವಿವಾಹಾದಿಗಳಲ್ಲಿ ಚಂದ್ರನು ಸೂರ್ಯಸಂಬಂಧನಾದರೆ ಹರಿದ್ರತ್ವ, ಅಂಗಾರಕಸಂಬಂಧನಾದರೆ ಸಂತಾನರಾಹಿತ್ಯ, ಗುರುಸಂಬಂಧವಿದ್ದರೆ ದುಃಖ, ಶುಕ್ರಸಂಬಂಧವಿದ್ದರೆ ಸಪತ್ನೀಪ್ರದ, ಶನಿಸಂಬಂಧವಿದ್ದರೆ ಐಶ್ವರ್ಯಹಾನಿ, ರಾಹುಸಂಬಂಧವಿದ್ದರೆ ಕಲಹ, ಕೇತುಸಂಬಂಧವಿದ್ದರೆ ದುರ್ವಾರ್ತಾಶ್ರವಣವೂ ಆಗಿ ಇದನ್ನು ಸಹಸ್ರಚಂದ್ರದೋಷವೆನ್ನುತ್ತಾರೆ.

10. **ವಾರಜನಿತ ದುರ್ಮುಹೂರ್ತ :** ಪ್ರತಿದಿನದಲ್ಲಿಯೂ 2-2 ಘಳಿಗೆಗೆ ಒಂದು ಮುಹೂರ್ತದ ಮೇರೆಗೆ 1 ರುದ್ರ, 2 ಉರಗ, 3 ಮಿತ್ರ, 4 ಪಿತೃ, 5 ವಸು, 6 ವಾರ, 7 ವಿಶ್ವದೇವ, 8 ವಿಧಿ, 9 ಬ್ರಹ್ಮ, 10 ಇಂದ್ರ, 11 ಹುತಾಶನ, 12 ದೈತ್ಯ, 13 ವರಣ, 14 ಆರ್ಯಮ, 15 ಭಗ ಎಂಬುದಾಗಿ ಹದಿನೈದು ಮುಹೂರ್ತಗಳಿರುವವು. ಇದರಲ್ಲಿ ಭಗ, ಇಂದ್ರ, ಹುತಾಶನ, ದೈತ್ಯೇಂದ್ರ, ಪಿತೃ ಈ ಮುಹೂರ್ತಗಳನ್ನು ಬಿಟ್ಟು ಇತರ ಮುಹೂರ್ತಗಳಲ್ಲಿ ಶುಭಕಾರ್ಯ ಮಾಡುವುದು. ಇದನ್ನು ವಾರಜನಿತ ಮುಹೂರ್ತವೆನ್ನುತ್ತಾರೆ.

**11. ಖಾರ್ಜೂರೀಚಕ್ರದೋಷ :** ಖರ್ಜೂರದ ಎಲೆಯಂತೆ ಒಂದು ವೃತ್ತವನ್ನು ಬರೆದು ಅದರ ಅಗ್ರಭಾಗದಲ್ಲಿ ಅಶ್ವಿನೀ ನಕ್ಷತ್ರವನ್ನೂ, ವಿಷ್ಕಂಬಯೋಗವನ್ನೂ ಬರೆದು ಅದರ ಕೆಳಗೆ ಅಡ್ಡಡ್ಡವಾಗಿ 13 ಗೀಟುಗಳನ್ನು ಬರೆದು ಉಳಿದ 26 ನಕ್ಷತ್ರಗಳನ್ನೂ, 26 ಯೋಗಗಳನ್ನೂ ಬರೆದು ಸೂರ್ಯ ಚಂದ್ರರು ಸಂಚರಿಸುವ ನಕ್ಷತ್ರಗಳು, ಒಂದೇ ರೇಖೆಯಲ್ಲಿ ಸೇರಿದರೆ ಪರಸ್ಪರ ದೃಷ್ಟಿಯುಳ್ಳವರಾಗುವರು. ಒಂದೇ ರೇಖೆಯಲ್ಲಿ, ಒಂದೇ ಪಾರ್ಶ್ವದಲ್ಲಿ ಸೇರಿದರೆ ದೋಷವೆಂದು ಉಕ್ತವಾಗಿರುವುದು. ಆದುದರಿಂದ ಭಿನ್ನ ರೇಖೆಗಳಲ್ಲಿ ದೃಷ್ಟಿಯಿಲ್ಲದ ಕಾಲದಲ್ಲಿ ಶುಭಕಾರ್ಯವನ್ನು ಮಾಡುವುದು. ಇದನ್ನು ಖಾರ್ಜೂರೀಚಕ್ರದೋಷವೆಂದು ಹೇಳಲಾಗಿದೆ.

**12. ಗ್ರಹಣೋತ್ಪಾತದೋಷ :** ಭೂಕಂಪ, ಧೂಮಕೇತು ಗ್ರಹಗಳು, ನಕ್ಷತ್ರದೃಷ್ಟಿ ಮುಂತಾದವುಗಳು ಕಂಡಾಗ್ಗೆ ಪೂರ್ವಾಪರಗಳಲ್ಲಿ 7-7 ದಿನಗಳು ಬಿಡಬೇಕೆಂದಿರುವುದು. ಇದು ಗ್ರಹಣೋತ್ಪಾತದೋಷವೆನ್ನಿಸಿಕೊಳ್ಳುತ್ತದೆ.

**13. ಕ್ರೂರಗ್ರಹಯುಕ್ತ ನಕ್ಷತ್ರ :** ಕ್ರೂರಗ್ರಹಗಳು ಸೇರಿದ ನಕ್ಷತ್ರಗಳು ಜ್ವಾಲಾಯುಕ್ತವಾದುದು. ಕ್ರೂರಗ್ರಹಗಳಿಂದ ಬಿಡಲ್ಪಟ್ಟ ನಕ್ಷತ್ರಗಳು ಭಸ್ಮೀಭೂತವಾದುದು. ಕ್ರೂರಗ್ರಹ ಪ್ರವೇಶ ಮಾಡುವ ಮುಂದಲ ನಕ್ಷತ್ರವು ಧೂಮಾಯಮಾನವಾದುದು. ಇದು ಶುಭಕಾರ್ಯಕ್ಕೆ ವರ್ಜ್ಯವು. ಇದು ಕ್ರೂರಗ್ರಹಯುಕ್ತ ನಕ್ಷತ್ರವೆಂದು ಹೇಳಿಸಿಕೊಳ್ಳುತ್ತದೆ.

**14. ಪಂಚಶಲಾಕವೇಧ :** ಐದು ರೇಖೆಗಳನ್ನು ಉದ್ದವಾಗಿಯೂ, ಐದು ರೇಖೆಗಳನ್ನು ಅಡ್ಡವಾಗಿಯೂ ಬರೆದು, ಈಶಾನ್ಯದಿಂದ ನೈಋತ್ಯದವರೆಗೆ ಒಂದು ರೇಖೆಯನ್ನೂ, ಆಗ್ನೇಯದಿಂದ ವಾಯವ್ಯದವರೆಗೆ ಒಂದು ರೇಖೆಯನ್ನೂ ಹಾಕಿದರೆ 28 ರೇಖೆಗಳಾಗುವವು. ಇದರಲ್ಲಿ ಈಶಾನ್ಯರೇಖೆ ಆದಿಯಾಗಿ ಅಭಿಜಿತ್ ಸೇರಿದ 24 ನಕ್ಷತ್ರಗಳನ್ನು ಅಶ್ವಿನ್ಯಾದಿಯಾಗಿ ಬರೆದು ಯಾವ ರೇಖಾಗ್ರದಲ್ಲಿ ಯಾವ ಗ್ರಹ ನಕ್ಷತ್ರವಿರುವುದೋ ಅದೇ ರೇಖಾಗ್ರದಲ್ಲಿ ಪಾಪಗ್ರಹವಿದ್ದರೆ ಅದು ಶುಭಕರ್ಮಗಳಲ್ಲಿ ಅವಶ್ಯಕ ಬಿಡಬೇಕಾದುದು. ಇದು ಪಂಚಕಶಲಾಕವೇಧೆ ಎನ್ನಿಸಿಕೊಳ್ಳುವುದು.

15. **ಗ್ರಹಣೋತ್ಪಾತದೋಷ :** ಗ್ರಹಣವು ಯಾವ ನಕ್ಷತ್ರದಲ್ಲಿ ಹಿಡಿಯುವುದೋ ಆ ನಕ್ಷತ್ರವು ಪೂರ್ಣಗ್ರಹಣವಾದರೆ 6 ತಿಂಗಳು ಬಿಡಬೇಕೆಂತಲೂ, ಮುಕ್ಕಾಲು ಗ್ರಾಸವಾದರೆ 4 $^1/_2$ ತಿಂಗಳು ಬಿಡಬೇಕೆಂತಲೂ, ಅರ್ಧ ಗ್ರಾಸವಾದರೆ 3 ತಿಂಗಳು ಬಿಡಬೇಕೆಂತಲೂ, ಕಾಲುಗ್ರಾಸವಾದಲ್ಲಿ 1 $^1/_2$ ತಿಂಗಳು ಬಿಡಬೇಕೆಂತಲೂ ಉಕ್ತವಿರುತ್ತದೆ. ಇದನ್ನು ಗ್ರಹಣೋತ್ಪಾತದೋಷವೆನ್ನುವರು.

16. **ನಕ್ಷತ್ರತ್ಯಾಜ್ಯದೋಷ :** ಪಂಚಾಂಗಗಳಲ್ಲಿ ಬರೆದಿರುವ ದಿವಿ, ರಾವಿ ಎನ್ನುವ ಘಳಿಗೆ, ವಿಘಳಿಗೆಗಳ ಮೇಲೆ 4 ಘಳಿಗೆಗಳವರೆವಿಗೂ ಚಂದ್ರನು ಆಯಾಯ ಕಾಲಗಳಲ್ಲಿ ಆಯಾ ನಕ್ಷತ್ರಗಳ ಸಮೀಪ ಸಂಚರಿಸುವ ಕಾಲವಾದುದರಿಂದ ಶುಭಕಾರ್ಯ ವರ್ಜ್ಯ. ಇದು ನಕ್ಷತ್ರತ್ಯಾಜ್ಯವೆನ್ನಿಸಿಕೊಳ್ಳುವುದು.

17. **ಲಗ್ನಾಸ್ತದೋಷ :** ಲಗ್ನದ ನವಾಂಶವು ನವಾಂಶಾಧಿಪತಿಯಿಂದ ಆಗಲಿ, ಲಗ್ನಾಧಿಪತಿಯಿಂದ ಆಗಲಿ ನೋಡಲ್ಪಟ್ಟರೆ ಶುಭವು. ಪಾಪಗ್ರಹಗಳಿಂದ ನೋಡಲ್ಪಟ್ಟರೆ ಅಶುಭವು. ಸಪ್ತಮಸ್ಥಾನಾಧಿಪತಿ ಸ್ವಮಿತ್ರಕ್ಷೇತ್ರಗತನಾಗಿ ಶುಭಗ್ರಹ ಸಂಬಂಧನಾಗಿ ನೋಡಲ್ಪಟ್ಟರೆ ಶುಭವು. ನೀಚ ಶತ್ರುಕ್ಷೇತ್ರಗತನಾಗಿ ಕ್ರೂರಗ್ರಹಗಳಿಂದ ನೋಡಲ್ಪಟ್ಟರೆ ಅಶುಭಕರ. ಇದು ಲಗ್ನಾಸ್ತದೋಷವೆನ್ನಿಸಿಕೊಳ್ಳುವುದು.

18. **ಗಂಡಾಂತದೋಷ :** ಅಶ್ವಿನಿ, ಮಖ, ಮೂಲ ಈ ನಕ್ಷತ್ರಗಳ ಆದಿಭಾಗ 4 ಘಳಿಗೆಗಳು, ಆಶ್ಲೇಷ, ಜ್ಯೇಷ್ಠ, ರೇವತಿ ಈ ನಕ್ಷತ್ರಗಳ ಅಂತ್ಯಭಾಗ 4 ಘಳಿಗೆಗಳು ಗಂಡಾಂತವಾದ್ದರಿಂದ ಶುಭಕಾರ್ಯ ನಿಂದ್ಯವು. ಇದು ಗಂಡಾಂತದೋಷ ವೆನ್ನಿಸಿಕೊಳ್ಳುವುದು.

19. **ಲಗ್ನಗಂಡಾಂತದೋಷ :** ಮೀನಲಗ್ನದಲ್ಲಿ ಕೊನೆಯ ಭಾಗ 4 ಘಳಿಗೆಯೂ, ಮೇಷಲಗ್ನದಲ್ಲಿ ಆದಿಭಾಗ 4 ಘಳಿಗೆಯೂ, ಕರ್ಕಾಟಕ ಲಗ್ನದಲ್ಲಿ ಕೊನೆಯಭಾಗ 4 ಘಳಿಗೆಯೂ, ಸಿಂಹಲಗ್ನದಲ್ಲಿ ಆದಿಭಾಗ 4 ಘಳಿಗೆಯೂ, ವೃಶ್ಚಿಕಲಗ್ನದಲ್ಲಿ ಕೊನೆಯ ಭಾಗ ಅರ್ಧ ಘಳಿಗೆಯೂ, ಧನುರ್ಲಗ್ನದಲ್ಲಿ ಆದಿಭಾಗ 4 ಘಳಿಗೆಯೂ ಲಗ್ನಗಂಡಾಂತವಾದುದರಿಂದ ಈ ಕಾಲದಲ್ಲಿ ಶುಭಕರ್ಮವನ್ನು ಮಾಡಕೂಡದು. ಇದು ಲಗ್ನಗಂಡಾಂತದೋಷವೆನ್ನಿಸಿಕೊಳ್ಳುತ್ತದೆ.

**20. ತಿಥಿಗಂಡಾಂತದೋಷ :** ನಂದ, ಭದ್ರ, ಜಯ, ರಿಕ್ತಾ, ಪೂರ್ಣ ಎಂದು ಕರೆಯುವ ಶುಕ್ಲ-ಕೃಷ್ಣ ಪಕ್ಷಗಳ ಪ್ರತಿಪದಾ ಮೊದಲುಗೊಂಡು ನಂದ ತಿಥಿಗಳ ಆದಿಭಾಗದಲ್ಲಿ 2 ಘಳಿಗೆಗಳೂ, ಪೂರ್ಣ ತಿಥಿಗಳ ಕೊನೆಯಭಾಗ 2 ಘಳಿಗೆಗಳೂ ತಿಥಿಗಂಡಾಂತ ಎನ್ನಿಸಿಕೊಳ್ಳುವುದು. ಈ ಕಾಲದಲ್ಲಿ ಶುಭಕರ್ಮ ಮಾಡಕೂಡದು.

**21. ಮಹಾಪಾತದೋಷ :** ಗಣಿತಾಗಣಿತವಾದ ಆಯಾಯ ತಿಥಿಗಳಲ್ಲಿ ಬರುವ ಮಹಾಪಾತ, ಅಘೋಪಾತ, ಅಲಕ್ಷಣಪಾತ, ವ್ಯಪ್ರ, ಮಹಾವ್ಯಪ್ರ, ಅಭಾವಪಾತ, ದ್ವಿರ್ಭವಪಾತ ಮೊದಲಾದವುಗಳು ಯಾವ ದಿವಸಗಳಲ್ಲಿ ಬರುವುದೋ ಆ ದಿನಗಳಲ್ಲಿ ಶುಭಕರ್ಮವನ್ನು ಮಾಡಕೂಡದು. ಇದನ್ನು ಮಹಾಪಾತದೋಷವೆಂದು ತಿಳಿಯುವುದು.

## ಇತರ ದೋಷಗಳು

ಮಳೆ, ಮೋಡ ಮುಚ್ಚಿರುವುದು, ಗುಡುಗು-ಮಿಂಚು, ಚಂದ್ರಸೂರ್ಯರು ಕಾಣದಿರುವುದು, ದಿಕ್ಕುಗಳು ಮಲಿನವಾಗುವುದು, ಧೂಮಕೇತು ಮುಂತಾದವುಗಳು ಕಾಣಿಸುವಿಕೆ, ದುಃಖಶಕುನಗಳು, ದುಃಸ್ವಪ್ನಗಳು, ದುಷ್ಟವಸ್ತುಪ್ರದರ್ಶನ, ದುಷ್ಟವಾಕ್ಯ ಶ್ರವಣ, ಕೆಟ್ಟಗಾಳಿ ಬೀಸುವಿಕೆ ಮತ್ತು ನಕ್ಷತ್ರಪತನ, ಉಲ್ಕಾಪಾತ, ಅಶನಿಪಾತ, ಗುರುಶುಕ್ರರ ಅಸ್ತ ಮತ್ತು ಸಮಸಪ್ತಮತ್ವ, ದಿಗ್ದಾಹ, ಗುಳಿಕ, ಯಮಕಂಟಕ, ಅರ್ಧಪ್ರಹಾರ, ವಾರಜನಿತ, ದುರ್ಮುಹೂರ್ತಲತ್ತ, ಉಪಗ್ರಹ, ಸರ್ವತೋಭದ್ರಚಕ್ರದೋಷ, ಶೂನ್ಯತಿಥಿ, ಶೂನ್ಯನಕ್ಷತ್ರ, ಶೂನ್ಯಯೋಗ, ಪಂಗುಕಾಣ, ಬಧಿರ ನಕ್ಷತ್ರ ಮುಂತಾದವುಗಳು ಶುಭಕಾರ್ಯಗಳಲ್ಲಿ ನಿಂದಿತವಾದವುಗಳೆಂದು ತಿಳಿಯುವುದು.

## ಮುಖ್ಯ ವಿಷಯ

ಏಕವಿಂಶತಿ ದೋಷಗಳನ್ನು ಬಿಟ್ಟು ಲಗ್ನವನ್ನು ನಿರ್ಣಯಿಸಬೇಕಾದರೆ ಬ್ರಹ್ಮಾದಿಗಳಿಗೂ ಅಶಕ್ತವಾಗಿರುವುದರಿಂದ ತಿಳಿದವರು ಗುಣದೋಷಗಳನ್ನು ಚೆನ್ನಾಗಿ ಪರಿಶೀಲಿಸಿ ಗುಣಾಧಿಕ್ಯದೋಷ ಸ್ವಲ್ಪವಾದ ಲಗ್ನವನ್ನು ನಿಶ್ಚಯಿಸಬೇಕು ಮತ್ತು ಉಕ್ತವಾದ ಮಾಸ, ಪಕ್ಷ, ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳು ಶ್ರೇಷ್ಠವಾಗಿರಬೇಕು. ಲಗ್ನಾದಿ ಗ್ರಹಸಂಪತ್ತುಗಳಲ್ಲಿ ಶುಭಗ್ರಹ ಕೇಂದ್ರತಿಕೋಣಾದಿ ಸ್ವೋಚ್ಚಮಿತ್ರ ರಾಶಿಗಳಲ್ಲಿ ಇರುವಾಗ್ಗೆ ನಿರ್ಣಯಿಸುವ ಮುಹೂರ್ತವಾದ ಕಾರಣ ಇದರಲ್ಲಿ ನಡೆಯಬಹುದಾದ ವಿವಾಹಾದಿ ಶುಭಕರ್ಮಗಳು ಅತ್ಯಂತ ಶುಭಪ್ರದವು.

## ಅಭ್ಯಂಗಸ್ನಾನ ವಿಷಯ

ಶನಿವಾರ, ಸೋಮವಾರ, ಬುಧವಾರಗಳು ಉತ್ತಮ. ಭಾನುವಾರ, ಶುಕ್ರವಾರಗಳು ಮಧ್ಯಮ. ಮಂಗಳವಾರ ಅರಿಷ್ಟಪ್ರದ. ರೋಗಮುಕ್ತನಾಗಿ ಅಭ್ಯಂಗಸ್ನಾನ ಮಾಡಲು ಭಾನುವಾರ ಗರಿಕೆ, ಸೋಮವಾರ ಪುಷ್ಪ, ಮಂಗಳವಾರ ಮೃತ್ತಿಕೆ, ಶುಕ್ರವಾರ ಸಗಣಿ ಇವುಗಳನ್ನು ಆಯಾಯ ವಾರಗಳಲ್ಲಿ ಎಣ್ಣೆಯಲ್ಲಿ ಸೇರಿಸಿದರೆ ದೋಷವಿಲ್ಲ. ಮತ್ತು ಉಭಯ ಷಷ್ಠಿಗಳು, ಅಷ್ಟಮಿಗಳು, ದ್ವಾದಶಿ, ಚತುರ್ದಶಿಗಳು, ಪೂರ್ಣಿಮಾ, ಅಮಾವಾಸ್ಯೆಗಳು ಈ ತಿಥಿಗಳಲ್ಲಿ ವ್ಯತಿಪಾತ-ವೈಧೃತಿ-ಮಹಾಪಾತ-ಸಂಕ್ರಮಣ ಪರ್ವಕಾಲಗಳಲ್ಲಿ, ಶ್ರಾದ್ಧ ದಿನಕ್ಕೆ ಪೂರ್ವ ಮೂರು ದಿನಗಳಲ್ಲಿ, ಜಾತಶೌಚ, ಮೃತಾಶೌಚಗಳಲ್ಲಿ, ಪ್ರಯಾಣಕಾಲದಲ್ಲಿ, ಆರಿದ್ರಾ, ಅಶ್ವಿನಿ, ಜ್ಯೇಷ್ಠ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ ಮತ್ತು ಜನ್ಮತಾರೆಗಳಲ್ಲಿ ತೈಲಾಭ್ಯಂಗ ಮಾಡಕೂಡದು. ಮತ್ತು ಈ ನಿಷೇಧ ದಿವಸಗಳು ಬಾಲಕರಿಗೂ, ವೃದ್ಧರಿಗೂ, ರೋಗಪೀಡಿತರಿಗೂ, ಉಪನಯನ ವಿವಾಹ ಕಾಲಗಳಲ್ಲಿಯೂ ಈ ನಿಯಮವಿರುವುದಿಲ್ಲ. ಇದಲ್ಲದೆ ತನ್ನ ಜನ್ಮದಿವಸ, ಯುಗಾದಿ, ನರಕಚತುರ್ದಶಿ, ಬಲಿಪಾಡ್ಯಮಿ, ಮಕರಸಂಕ್ರಾಂತಿ ಪೂರ್ವದಿನ, ಗರ್ಭಾದಾನ ಕರ್ಮದಿನಗಳಲ್ಲಿ, ನಾಮಕರಣ ದಿನಗಳಲ್ಲಿ, ಶಾಂತಿಪೌಷ್ಟಿಕ ದಿನಗಳಲ್ಲಿ, ಮೃತಾಶೌಚ ನಿವೃತ್ತಿಯಾದ ನಂತರದ ದಿನದಲ್ಲಿ ಅಭ್ಯಂಗಕ್ಕೆ ಮೇಲ್ಕಂಡ ದೋಷಗಳಿರುವುದಿಲ್ಲವೆಂದು ಉಕ್ತವಾಗಿರುವುದು.

## ಗ್ರಹಗಳಿಗೆ ಮಿತ್ರ-ಸಮಶತ್ರುತ್ವ ವಿಷಯ

ಸೂರ್ಯನಿಗೆ ಶುಕ್ರ ಶನಿಗಳು ಶತ್ರು, ಬುಧನು ಸಮನು, ಉಳಿದವರು ಮಿತ್ರರು. ಚಂದ್ರನಿಗೆ ರವಿ ಬುಧರು ಮಿತ್ರರು, ಉಳಿದವರು ಸಮರು. ಅಂಗಾರಕನಿಗೆ ಸೂರ್ಯ ಚಂದ್ರರು ಮಿತ್ರರು, ಬುಧನು ಶತ್ರು, ಉಳಿದವರು ಸಮರು. ಬುಧನಿಗೆ ರವಿ ಶುಕ್ರರು ಮಿತ್ರರು, ಚಂದ್ರ ಶತ್ರು, ಉಳಿದವರು ಸಮರು. ಗುರುವಿಗೆ ಬುಧ ಶುಕ್ರರು ಶತ್ರುಗಳು, ಶನಿಯು ಸಮನು, ಉಳಿದವರು ಮಿತ್ರರು. ಶುಕ್ರನಿಗೆ ಬುಧ ಶನಿಗಳು ಮಿತ್ರರು, ಕುಜ ಗುರುಗಳು ಸಮರು, ಉಳಿದವರು ಶತ್ರುಗಳು. ಶನಿಗೆ ಬುಧ ಶುಕ್ರರು ಮಿತ್ರರು, ಗುರು ಸಮರು, ಉಳಿದವರು ಶತ್ರುಗಳು ಎಂದು ತಿಳಿಯುವುದು.

## ಗ್ರಹಗಳಿಗೆ ಮೂಲ ತ್ರಿಕೋಣರಾಶಿಗಳ ವಿಷಯ

ಸೂರ್ಯನಿಗೆ ಸಿಂಹದಲ್ಲಿ 20 ಭಾಗದವರೆವಿಗೆ ಮೂಲ ತ್ರಿಕೋಣ, ಅನಂತರ ಸ್ವಕ್ಷೇತ್ರ. ಚಂದ್ರನಿಗೆ ವೃಷಭದಲ್ಲಿ 3 ಭಾಗ ಉಚ್ಚ, 27 ಭಾಗ ಮೂಲ ತ್ರಿಕೋಣ.

ಅಂಗಾರಕನಿಗೆ ಮೇಷದಲ್ಲಿ 12 ಭಾಗ ಮೂಲ ತ್ರಿಕೋಣ, ಅನಂತರ ಸ್ವಕ್ಷೇತ್ರ. ಬುಧನಿಗೆ ಕನ್ಯೆಯಲ್ಲಿ 15 ಭಾಗ ಉಚ್ಚ ಅನಂತರ 5 ಭಾಗ ಮೂಲ ತ್ರಿಕೋಣ, ಅನಂತರ ಸ್ವಕ್ಷೇತ್ರ. ಗುರುವಿಗೆ ಧನುಸ್ಸಿನಲ್ಲಿ 10 ಭಾಗ ಮೂಲ ತ್ರಿಕೋಣ, ಅನಂತರ ಸ್ವಕ್ಷೇತ್ರ. ಶುಕ್ರನಿಗೆ ತುಲಾದಲ್ಲಿ 15 ಭಾಗ ಮೂಲತ್ರಿಕೋಣ, ಅನಂತರ ಸ್ವಕ್ಷೇತ್ರ. ಶನಿಗೆ ಕುಂಭದಲ್ಲಿ 20 ಭಾಗ ಮೂಲ ತ್ರಿಕೋಣ, ಅನಂತರ ಸ್ವಕ್ಷೇತ್ರ ಎಂಬುದಾಗಿ ತಿಳಿಯುವುದು.

## ರಾಹು ಕೇತುಗಳಿಗೆ ಉಚ್ಚಮೂಲ ಶತ್ರು ಮಿತ್ರತ್ವ

ರಾಹುವಿಗೆ ಮಿಥುನದಲ್ಲಿ ಉಚ್ಚ, ಸಿಂಹ ತ್ರಿಕೋಣ, ಕನ್ಯಾ ಸುಕ್ಷೇತ್ರ, ಶುಕ್ರ ಶನಿಗಳು ಮಿತ್ರರು, ರವಿ ಚಂದ್ರ ಕುಜರು ಶತ್ರುಗಳು, ಬುಧ ಗುರುಗಳು ಸಮರು ಎಂಬುದಾಗಿಯೂ, ಕೇತುವಿಗೆ ಧನುಸ್ಸು ಉಚ್ಚ, ಕುಂಭ ತ್ರಿಕೋಣ, ಮೀನ ಸ್ವಕ್ಷೇತ್ರ, ಶುಕ್ರ ಶನಿಗಳು ಮಿತ್ರರು, ರವಿ ಚಂದ್ರ ಕುಜರು ಶತ್ರುಗಳು, ಬುಧ ಗುರುಗಳು ಸಮರು ಎಂಬುದಾಗಿ ತಿಳಿಯುವುದು.

## ಗ್ರಹಗಳ ಲತ್ತಾ ವಿಷಯ

ತನ್ನ ಜನ್ಮನಕ್ಷತ್ರಕ್ಕೆ ಮುಂದೆ ಸೂರ್ಯನು 12ನೇ ನಕ್ಷತ್ರದಲ್ಲಿಯೂ, ಅಂಗಾರಕನು 3ನೇ ನಕ್ಷತ್ರದಲ್ಲಿಯೂ, ಗುರು 6ನೇ ನಕ್ಷತ್ರದಲ್ಲಿಯೂ, ಶನಿ 8ನೇ ನಕ್ಷತ್ರದಲ್ಲಿಯೂ ಇರುವುದಾದರೆ ಪುರೋಲತ್ತೆ ಎಂಬುದಾಗಿಯೂ, ಜನ್ಮನಕ್ಷತ್ರಕ್ಕೆ ಹಿಂದೆ ಬುಧನು 7ನೇ ನಕ್ಷತ್ರದಲ್ಲಿಯೂ, ಶುಕ್ರ, ರಾಹು, ಕೇತುಗಳು 5ನೇ ನಕ್ಷತ್ರದಲ್ಲಿಯೂ, ಚಂದ್ರನು 22ನೇ ನಕ್ಷತ್ರದಲ್ಲಿಯೂ ಇರುವುದಾದರೆ ಪಶ್ಚಾಲ್ಲತ್ತೆ ಎಂಬುದಾಗಿ ತಿಳಿಯುವುದು.

## ಗ್ರಹಗಳ ಲತ್ತಾಫಲವು

ಸೂರ್ಯಲತ್ತೆಯಿಂದ ಅರ್ಥಹಾನಿ, ಕುಜ ಶನಿಗಳ ಲತ್ತೆಯಿಂದ ಮೃತ್ಯು, ಚಂದ್ರಲತ್ತೆಯಿಂದ ಬಂಧುನಾಶ, ಶುಕ್ರಲತ್ತೆಯಿಂದ ಕಾರ್ಯಹಾನಿ, ಬುಧಲತ್ತೆಯಿಂದ ಅನರ್ಥ, ರಾಹುಕೇತುಗಳ ಲತ್ತೆಯಿಂದ ರೋಗವೂ ಸಹ ಉಂಟಾಗುವುದರಿಂದ ಲತ್ತಾಗ್ರಹಗಳನ್ನು ಸರ್ವತ್ರ ನೋಡುವುದು ಉತ್ತಮ.

॥ ಇತಿ ಜ್ಯೋತಿಷ ಬಾಲಬೋಧೆ ಸಂಪೂರ್ಣ ॥



